CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೮ | ಬೆಂಗಳೂರು, ಗುರುವಾರ, ಅಕ್ಟೋಬರ್ ೧೬ ೨೦೦೩ (ಆಶ್ವಯುಜ ೨೪ ಶಕ ವರ್ಷ ೧೯೨೫) | ಸಂಚಿಕೆ ೪೧ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಚಿತ್ರದುರ್ಗ,**

**ಪ್ರಕಟಣೆ**

**ಸಂ:ಜಿಸಕಅ:ಎಸ್4:ಕಾಪತ:ಸಿಆರ್: 2002-03 ಚಿತ್ರದುರ್ಗ ದಿನಾಂಕ: 4ನೇ ಸೆಪ್ಟೆಂಬರ್ 2003**

**ವಿಷಯ :** 2003-04ನೇ ಸಾಲಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ನೀಡಲು ಪ.ಜಾತಿಯ ಕಾನೂನು ಪದವೀಧರರನ್ನು ಆಯ್ಕೆ ಮಾಡುವ ಕುರಿತು.

2003-04ನೇ ಸಾಲಿನಲ್ಲಿ ಸಮಾಜ ಕಲ್ಯಾಣ ಇಲಾಖೆವತಿಯಿಂದ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ನೀಡಲು ಪ.ಜಾತಿಯ ಕಾನೂನು ಪದವೀಧರರರನ್ನು ಆಯ್ಕೆ ಮಾಡುವ ಸಲುವಾಗಿ ಕಾನೂನು ಪದವೀಧರರಿಂದ ಅರ್ಜಿಗಳನ್ನು ಕರೆಯಲಾಗಿದೆ. ನಿಗದಿತ ಅರ್ಜಿ ನಮೂನೆಯನ್ನು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯಲ್ಲಿ, ಕಛೇರಿ ವೇಳೆಯಲ್ಲಿ ಪಡೆಯಬಹುದು. ಭರ್ತಿ ಮಾಡಲಾದ ಅರ್ಜಿಗಳನ್ನು ದಿನಾಂಕ: 30.9.2003 ರೊಳಗಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಗೆ ಸಲ್ಲಿಸಬೇಕು. ನಂತರ ಬರುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

**ನಿಯಮ**

1. ಅರ್ಜಿಸಲ್ಲಿಸಿದ ಕೊನೆಯ ದಿನಾಂಕಕ್ಕೆ ಕಾನೂನು ಪದವಿ ಪಡೆದು 2 ವರ್ಷಕ್ಕೆ ಮೀರಿರಬಾರದು.
2. ತರಬೇತಿಯನ್ನು ಚಿತ್ರದುರ್ಗ ಜಿಲ್ಲೆಯಲ್ಲಿಯೇ ಪಡೆಯಬೇಕು.
3. ಅರ್ಜಿಸಲ್ಲಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯ ವಯಸ್ಸು 35 ಕ್ಕೆ ಮೀರಿರಬಾರದು
4. ಆಯ್ಕೆ ಮಾಡಲಾದ ಅಭ್ಯರ್ಥಿಗಳಿಗೆ ತರಬೇತಿ ಅವಧಿಯಲ್ಲಿ ಸರ್ಕಾರದ ಆದೇಶದ ರೀತ್ಯಾ ಶಿಷ್ಯವೇತನವನ್ನು ನೀಡಲಾಗುವುದು.
5. ಆಯ್ಕೆಯಾದ ಅಭ್ಯರ್ಥಿಗಳು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್ ಸರ್ಕಾರಿ ವಕೀಲರು ಅಥವಾ 20 ವರ್ಷಗಳ ಕಾಲ ಕಡಿಮೆ ಇಲ್ಲದ ವಕೀಲರ ವೃತ್ತಿಯಲ್ಲಿ ಸೇವೆ ಸಲ್ಲಿಸಿರುವ ನ್ಯಾಯಾವಾದಿಗಳ ಬಳಿ ತರಬೇತಿ ಪಡೆಯಬೇಕು ಹಾಗೂ ಯಾರ ಬಳಿ ತರಬೇತಿ ಪಡೆಯುತ್ತಿದ್ದಾರೆ ಎಂಬ ಬಗ್ಗೆ ಲಿಖಿತ ರೂಪದಲ್ಲಿ ತಿಳಿಸಬೇಕು.
6. ತರಬೇತಿಯ ಅವಧಿಯೂ 4 ವರ್ಷವಿದ್ದು ಆಯ್ಕೆಯಾದ ಅಭ್ಯರ್ಥಿಗಳು ತರಬೇತಿಯನ್ನು ಮಧ್ಯದಲ್ಲಿ ಬಿಡುವುದಿಲ್ಲವೆಂದು ಒಂದು ವೇಳೆ ಬಿಟ್ಟರೆ ತರಬೇತಿ ಅವಧಿಯಲ್ಲಿ ಪಡೆದಿರುವ ಶಿಷ್ಯವೇತನವನ್ನು ಶೇ 10 ರೂ.ಗಳ ಬಡ್ಡಿಯೊಂದಿಗೆ ಸರ್ಕಾರಕ್ಕೆ ಹಿಂದಿರುಗಿಕಟ್ಟುವುದಾಗಿ ಮುಚ್ಚಳಿಕೆ ಬರೆದುಕೊಡಬೇಕು ಈ ನಿಯಮವು ರಾಜ್ಯ ಅಥವಾ ಕೇಂದ್ರ ಸರ್ಕಾರದಲ್ಲಿ ನೌಕರಿ ಪಡೆದರೆ ಅನ್ವಯಿಸುವುದಿಲ್ಲ.
7. ಆಯ್ಕೆಯಾದ ಅಭ್ಯರ್ಥಿಗಳು ಸುಳ್ಳು ಮಾಹಿತಿ ಹಾಗೂ ಸುಳ್ಳು ದಾಖಲಾತಿಯನ್ನು ನೀಡಿ ಆಯ್ಕೆಯಾಗಿ ಶಿಷ್ಯವೇತನ ಪಡೆದರೆ ಅಂತಹ ಅಭ್ಯರ್ಥಿಗಳು ತರಬೇತಿಯ ಅವಧಿಯಲ್ಲಿ ಪಡೆದ ಶಿಷ್ಯವೇತನವನ್ನು ಒಟ್ಟಿಗೆ ಶೇ 10 ರೂ.ಗಳ ಬಡ್ಡಿಯೊಂದಿಗೆ ಸರ್ಕಾರಕ್ಕೆ ಹಿಂದಿರುಗಿಕಟ್ಟಬೇಕು. ತಪ್ಪಿದರೆ ಭೂ ಕಂದಾಯ ಬಾಕಿ ವಸೂಲಿಯಂತೆ ವಸೂಲಿ ಮಾಡಲಾಗುವುದು.

8. ಆಯ್ಕೆಯಾದ ಅಭ್ಯರ್ಥಿಯು ನಿಗದಿತ ದಿನಾಂಕದ ಒಳಗೆ ಹಾಜರಾಗದಿದ್ದರೆ ಅಂತಹವರ ಆಯ್ಕೆಯನ್ನು ರದ್ದುಪಡಿಸಲಾಗುವುದು.
9. ಸಂದರ್ಶನ ನಡೆಸುವ ಸ್ಥಳ ಮತ್ತು ದಿನಾಂಕವನ್ನು ಅಂಚೆ ಮೂಲಕ ತಿಳಿಸಲಾಗುವುದು.

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು,
ಪಿ.ಆರ್.1090 ಚಿತ್ರದುರ್ಗ ಜಿಲ್ಲೆ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ ಶಿವಮೊಗ್ಗ**

**ಫಾರಂ ನಂ. 11**

**38ನೇಯ ರೂಲಿನ (7)ನೇಯ ಕಲಂ**

**ಸ್ಥಿರಸ್ವತ್ತುಗಳನ್ನು ಕೊಂಡದಕ್ಕೆ ಪ್ರಕಟಣೆ**

ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ತಾಲ್ಲೂಕು, ದುರ್ಗಿಗುಡಿ ವಾಸಿಯಾದ ಶ್ರೀಮತಿ ಸಾವಿತ್ರಮ್ಮ ಕೋಂ ಬಿ.ಹೆಚ್. ನಂಜಪ್ಪ ಇವರು ಈ ಕೆಳಗೆ ತೋರಿಸಿದ ಸ್ಥಿರಸ್ವತ್ತುಗಳನ್ನು ಬಹಿರಂಗ ಹರಾಜಿನಲ್ಲಿ 2003 ನೇ ಇಸವಿ ಜುಲೈ ತಿಂಗಳು 1ನೇ ತಾರೀಖಿನಲ್ಲಿ ಕ್ರಯಕ್ಕೆ ಪಡೆದುಕೊಂಡಿದ್ದಾಗಿಯೂ ಮತ್ತು ದರಖಾಸ್ತು ಹಣ ರೂ.2,80,000/- ಗಳನ್ನು ಸಂಪೂರ್ಣವಾಗಿ ಪಾವತಿ ಮಾಡಿದ್ದಾಗಿಯೂ ಈ ಮೂಲಕ ಎಲ್ಲಾ ಜನರಿಗೆ ಬಹಿರಂಗವಾಗಿ ತಿಳಿಸೋಣವಾಗುತ್ತದೆ. ಆದ ಪ್ರಯುಕ್ತ ಸದರಿ ಸ್ಥಿರಸ್ವತ್ತುಗಳಲ್ಲಿರುವ ಬಾಕಿದಾರರು ಎಲ್ಲಾ ಹಕ್ಕು-ವ-ಪ್ರಯೋಜನಗಳಿಗೆ ಸದರಿ ಶ್ರೀಮತಿ ಸಾವಿತ್ರಮ್ಮ ಕೋಂ ಬಿ.ಹೆಚ್. ನಂಜಪ್ಪ ಇವರು ಉತ್ತರಾಧಿಕಾರಿಗಳಾಗಿದ್ದಾರೆ ಎಂಬುದಾಗಿ ಈ ಮೂಲಕ ದೃಢಪಡಿಸೋಣವಾಗಿರುತ್ತದೆ.

| ಗ್ರಾಮ ಮತ್ತು ತಾಲ್ಲೂಕ್ | ಸ್ಥಿರಸ್ವತ್ತುಗಳ ವಿವರ:ತರಹೆ | ಖಾತೆ ನಂ. ಸರ್ವೇ ನಂ. | ಸ್ಥಿರಾಸ್ತಿಯ ವಿವರ ಖಾತೆದಾರರ ಹೆಸರು | ಅಂದಾಜು ವಿಸ್ತೀರ್ಣ | ಆಕಾರ | ಷರಾ |
|---|---|---|---|---|---|---|
| ಗಾಜನೂರು ಗ್ರಾಮ ಶಿವಮೊಗ್ಗ ತಾಲ್ಲೂಕ್ | ಮಳೆತರಿ | 116 | ಶ್ರೀ ರಂಗಪ್ಪ ಬಿನ್ ಉಗ್ರಪ್ಪ ಗಾಜನೂರು ಗ್ರಾಮ | 2.06 | -- | ಸದರಿ ಸ್ವತ್ತನ್ನು ಪ್ರಾಥಮಿಕ ಸಹಕಾರಿ ಕೃಷಿ |

ಮತ್ತು ಅಭಿವೃದ್ಧಿ ಬ್ಯಾಂಕ್ ಶಿವಮೊಗ್ಗ, ಇವರಿಗೆ ಬರಬೇಕಾದ ಬಾಕಿ ಮೊಬಲಗಿಗಾಗಿ ಬಹಿರಂಗ ಹರಾಜು ಮಾಡಿರುತ್ತದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಪಿ.ಆರ್. 1091 ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಇವರ ಕಾರ್ಯಾಲಯ**

**ಅಧಿಭಾರ ಅರ್ಜಿಸಂಖ್ಯೆ:3:2003-2004**

**ಅರ್ಜಿದಾರರು:**
ಕಾರ್ಯದರ್ಶಿ
ಶ್ರೀ ರೇವಣ್ಣ ಸಿದ್ದೇಶ್ವರ ಕಂಬಳಿ
ಉತ್ಪಾದನಾ ಮತ್ತು ಮಾರಾಟ
ಸಹಕಾರ ಸಂಘ (ನಿ),
ಚಿಕ್ಕನಾಯಕನಹಳ್ಳಿ.

**ಎದುರು ಅರ್ಜಿದಾರರು:**
ಶ್ರಿ ಲೇಟ್ ಸಿ. ಬಿ. ನಾರಾಯಣಸ್ವಾಮಿ
ಮಾಜಿ ಕಾರ್ಯದರ್ಶಿ,
ಶ್ರೀ ರೇವಣ್ಣ ಸಿದ್ದೇಶ್ವರ ಕಂಬಳಿ
ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘ (ನಿ).,
ಚಿಕ್ಕನಾಯಕನಹಳ್ಳಿ.
**ವಾರಸುದಾರರು:**
ಶ್ರೀಮತಿ ಮಂಜುಳ ಕೋಂ ಲೇಟ್
ಸಿ. ಬಿ. ನಾರಾಯಣಸ್ವಾಮಿ ಚಿಕ್ಕನಾಯಕನಹಳ್ಳಿ.

**ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 103 ರ ಅಡಿಯಲ್ಲಿ ಹೊರಡಿಸಿದ ತೀರ್ಪು ಮುನ್ನ ಜಪ್ತಿ ಆಜ್ಞೆ:**

**ಪ್ರಸ್ತಾವನೆ:**

ಶ್ರೀ ರೇವಣ್ಣ ಸಿದ್ದೇಶ್ವರ ಕಂಬಳಿ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘ (ನಿ) ಚಿಕ್ಕನಾಯಕನಹಳ್ಳಿ ಈ ಸಂಘದಲ್ಲಿ ಸಿ. ಬಿ. ನಾರಾಯಣಸ್ವಾಮಿ ಇವರು ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ರೂ. 171873-45 ಗಳನ್ನು ದುರುಪಯೋಗಪಡಿಸಿ ಕೊಂಡಿರುವುದು ಸಂಘದ 2001-2002ನೇ ಸಾಲಿನ ಆಡಿಟ್ ವರದಿಯಲ್ಲಿ ಬೆಳಕಿಗೆ ಬಂದಿದ್ದು ಸದರಿಯವರು ದುರುಪಯೋಗಪಡಿಸಿಕೊಂಡಿದ್ದ ಹಣವನ್ನು ಸಂಘಕ್ಕೆ ಮರು ಪಾವತಿಸುವ ಮುಂಚೆಯೇ ಮರಣ ಹೊಂದಿದ ಪ್ರಯುಕ್ತ ಅರ್ಜಿದಾರರು ದುರುಪಯೋಗವಾಗಿರುವ ಹಣದ ವಸೂಲಿಗಾಗಿ ಶ್ರೀ ಲೇಟ್ ಸಿ. ಬಿ. ನಾರಾಯಣಸ್ವಾಮಿಯವರ ಪತ್ನಿ ಶ್ರೀಮತಿ ಮಂಜುಳರವರನ್ನು ವಾರಸುದಾರರನ್ನಾಗಿ ಮಾಡಿ ಸಹಕಾರ ಸಂಘಗಳ ಕಾಯಿದೆ ಕಲಂ 69 ರಡಿಯಲ್ಲಿ ಅಧಿಭಾರ ಅರ್ಜಿದಾಖಲು ಮಾಡಿದ್ದು ಪ್ರಕರಣದ ವಿಚಾರಣೆಯು ಈ ನ್ಯಾಯಾಲಯದಲ್ಲಿ ನಡೆಯುತ್ತಿರುತ್ತದೆ.

ದುರುಪಯೋಗದ ಹಣವು ಹೆಚ್ಚಿನದಾಗಿದ್ದರಿಂದ ಸದರಿಯ ಸ್ಥಿರಾಸ್ತಿಯನ್ನು ತೀರ್ಪು ಮುನ್ನ ನ್ಯಾಯಾಲಯದ ವ್ಯಾಪ್ತಿಗೆ ಒಳಪಡಿಸುವಂತೆ ಅರ್ಜಿದಾರರು ಕೋರಿದ್ದರ ಮೇರೆಗೆ ಸಂಘದ ಹಿತದೃಷ್ಟಿಯಿಂದ ಭದ್ರತೆಗಾಗಿ ಶ್ರೀ ಲೇಟ್ ಸಿ. ಬಿ. ನಾರಾಯಣ ಸ್ವಾಮಿ ಇವರ ಕುಟುಂಬದ ಈ ಕೆಳಕಂಡ ಸ್ಥಿರಾಸ್ತಿಯನ್ನು ಷರತ್ತು ಸಹಿತ ತೀರ್ಪು ಮುನ್ನ ಜಪ್ತಿ ಆಜ್ಞೆಯನ್ನು ದಿನಾಂಕ:21.6.2003 ರಂದು ಆದೇಶ

ಹೊರಡಿಸಿ ಎದುರು ಅರ್ಜಿದಾರರಿಗೆ ನಿಗದಿತ ಅವಧಿಯೊಳಗೆ ಷರತ್ತು ಪೂರೈಸಲು ಸೂಚಿಸಲಾಗಿತ್ತು. ಅದರಂತೆ ಎದುರು ಅರ್ಜಿದಾರರು ಷರತ್ತು ಪೂರೈಸಲು ವಿಫಲರಾಗಿದ್ದರಿಂದ ಜಪ್ತಿ ಆಜ್ಞೆಯನ್ನು ಸ್ಥಿರೀಕರಿಸುವುದು ಅಗತ್ಯವೆಂದು ಮನಗಂಡು ಸ್ಥಿರೀಕರಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ನಂ:ಸನಿ-34:ಡಿಡಿಎಸ್: ಕಲಂ:103:67:2003-2004 ದಿನಾಂಕ: 18ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಆದ ನಾನು ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 103 ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ: 69: ಸಿಎಲ್ಎಂ: 2001 ದಿನಾಂಕ:21.11.2001ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸುತ್ತಾ ಈ ಕೆಳಗೆ ಕಾಣಿಸಿರುವ ಎದುರು ಅರ್ಜಿದಾರರ ಸ್ಥಿರ ಆಸ್ತಿಯನ್ನು ದಿನಾಂಕ: 21.6.2003 ರಂದು ಹೊರಡಿಸಿ ಷರತ್ತು ಸಹಿತ ತೀರ್ಪು ಮುನ್ನ ಜಪ್ತಿ ಆಜ್ಞೆಯನ್ನು ಈ ಮೂಲಕ ಸ್ಥಿರೀಕರಿಸಲಾಗಿದೆ.

ಈ ಕೆಳಕಂಡ ಸ್ಥಿರಾಸ್ತಿಗಳನ್ನು ಪಡೆಯುವ, ಖರೀದಿಸುವ ದಾನ ಪಡೆಯುವ ಅಥವಾ ಇನ್ನಾವುದೇ ರೀತಿ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ಈ ತೀರ್ಪು ಮುನ್ನ ಜಪ್ತಿ ಆಜ್ಞೆಗೆ ಒಳಪಡುವುದು ಎಂದು ಆದೇಶಿಸಿದೆ. ಒಂದು ವೇಳೆ ಈ ಜಪ್ತಿ ಆಜ್ಞೆಯನ್ನು ಉಲ್ಲಂಘಿಸಿ ಸ್ಥಿರಾಸ್ತಿಯನ್ನು ಪಡೆಯುವ ಖರೀದಿಸುವ, ದಾನ ಪಡೆಯುವ ಅಥವಾ ಇನ್ನಾವುದೇ ರೀತಿ ವ್ಯಕ್ತಿ ಅಥವಾ ಸಂಸ್ಥೆಗಳು ಹೊಂದಿದರೆ ಸಿಂಧುವಾಗುವುದಿಲ್ಲವೆಂದು ಸಾರ್ವಜನಿಕರಲ್ಲಿ ತಿಳಿಯಪಡಿಸಿದೆ.

**ಜಪ್ತಿ ಆದೇಶಕ್ಕೆ ಒಳಗಾದ ಸ್ಥಿರಾಸ್ತಿ ವಿವರ**

| ಕ್ರ.ಸಂ. | ಹಕ್ಕುದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಸರ್ವೆನಂ | ವಿಸ್ತೀರ್ಣ | ತರಹೆ |
|---|---|---|---|---|---|
| 1. | ಬೀರಪ್ಪ ಬಿನ್ ಮರಿಯಪ್ಪ | ಶಾವಿಗೆಹಳ್ಳಿ ಚಿ ನಾ ಹಳ್ಳಿ ತಾ. | 39:3ಪಿ ಪಿ1 | 0.29 | ಖುಷ್ಕಿ |
| 2. | ಬೀರಪ್ಪ ಬಿನ್ ಮರಿಯಪ್ಪ | ಶಾವಿಗೆಹಳ್ಳಿ ಚಿ ನಾ ಹಳ್ಳಿ ತಾ. | 38:2 ಎ ಪಿ | 0.18 | ಖುಷ್ಕಿ |

ಸಿ. ಬಿ. ನಾರಾಯಣಸ್ವಾಮಿ ಇವರ ಹೆಸರಿನಲ್ಲಿರುವ 20x35 ರ ಅಳತೆಯ ನಿವೇಶನದಲ್ಲಿ, ಚಿಕ್ಕನಾಯಕನಹಳ್ಳಿ ಟೌನ್ ನಾಲ್ಕನೆ ಡಿವಿಜನ್ ನಿರ್ಮಿಸಿರುವ ಮನೆ, ಮನೆ ನಂ.660,ಓ ನಂ.4242 ಆ ನಂ. 673.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 18.8.2003 ರಂದು ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಪಿ.ಆರ್. 1092 ತಿಪಟೂರು ಉಪವಿಭಾಗ, ತಿಪಟೂರು.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.**

**ಪ್ರಕರಣ ಸಂಖ್ಯೆ:ಕಾಪಕ:ಕಸ-58:03 ದಿನಾಂಕ: 12ನೇ ಸೆಪ್ಟೆಂಬರ್ 2003**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1. ಶ್ರೀಮತಿ ವಿಶಾಲ ಕೋಂ
ಶ್ರೀ ದಿ: ಶಿವಶಂಕರ್, ಟಿ. ಹೆಚ್. ಬಿ ಬಿ-3: ಎಲ್
ಶರಾವತಿ ಬಿಲ್ಡಿಂಗ್ ಹುತ್ತಾಕಾಲೋನಿ ಭದ್ರಾವತಿ

ಮ್ಯಾನೇಜಿಂಗ್ ಡೈರೆಕ್ಟರ್,
ವಿ.ಐ.ಎಸ್.ಎಲ್.
ಭದ್ರಾವತಿ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ದಿ: ಶಿವಶಂಕರ್, ಟಿ. ಹೆಚ್. ರವರು ಪ್ರತಿವಾದಿಯವರಲ್ಲಿ ಕಾರ್ಮಿಕ ಆಗಿ ಕೆಲಸದ ಮೇಲೆ ಇದ್ದಾಗ 31.7.03 ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿನಾಂಕ: 4.9.03 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾನೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದು ಏನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸಗಳ ಒಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ, ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಪಿ.ಆರ್. 1093 ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.**

**ಪ್ರಕರಣ ಸಂಖ್ಯೆ:ಕಾಪಕ:ಕಸ-59:03 ದಿನಾಂಕ: 12ನೇ ಸೆಪ್ಟೆಂಬರ್ 2003**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1. ಶ್ರೀಮತಿ ಮರ್ಷಿಲಿನ್ ವೇಗಾಸ್ ಕೋಂ ದಿ.
ವಾಲ್ಟರ್ ಲಾರೇನ್ಸ್ ಪಿಂಟೋ ಮನೆ ಸಂಖ್ಯೆ
ಐಡಿಕೆ-49. ನ್ಯೂ ಕಾಲೋನಿ ಭದ್ರಾವತಿ.

1. ಮ್ಯಾನೇಜಿಂಗ್ ಡೈರೆಕ್ಟರ್
ವಿ.ಐ.ಎಸ್.ಎಲ್.
ಭದ್ರಾವತಿ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದು ಏನೆಂದರೆ, ಮೃತ ವಾಲ್ಟರ್ ಲಾರೆನ್ಸ್ ಪಿಂಟೋ ರವರು ಪ್ರತಿವಾದಿಯವರಲ್ಲಿ ಕಾರ್ಮಿಕ ಆಗಿ ಕೆಲಸದ ಮೇಲೆ ಇದ್ದಾಗ 31.7.03 ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿನಾಂಕ: 2.9.03 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾನೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದು ಏನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸಗಳ ಒಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ, ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್. 1094

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.**

**ಪ್ರಕರಣ ಸಂಖ್ಯೆ:ಕಾಪಕ:ಕಸ-60:03 ದಿನಾಂಕ: 12ನೇ ಸೆಪ್ಟೆಂಬರ್ 2003**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1. ಶ್ರೀಮತಿ ಜಯಲಕ್ಷ್ಮಿ ಕೋಂ
ದಿ:ಜಿ ಮೂರ್ತಿ ಮನೆ ಸಂಖ್ಯೆ: ಎಸ್. ಕೆ.
50: ನ್ಯೂಕಾಲೋನಿ ಭದ್ರಾವತಿ.

1. ಮ್ಯಾನೇಜಿಂಗ್ ಡೈರೆಕ್ಟರ್
ವಿ.ಐ.ಎಸ್.ಎಲ್.
ಭದ್ರಾವತಿ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದು ಏನೆಂದರೆ, ಮೃತ ಜಿ. ಮೂರ್ತಿರವರು ಪ್ರತಿವಾದಿಯವರಲ್ಲಿ ಕಾರ್ಮಿಕ ಆಗಿ ಕೆಲಸದ ಮೇಲೆ ಇದ್ದಾಗ 31.7.03 ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿನಾಂಕ: 2.9.03 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾನೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದು ಏನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸಗಳ ಒಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ, ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್. 1095

**1ನೇ ಅಪರ ಮುಖ್ಯ ಮಹಾನಗರ ದಂಡಾಧಿಕಾರಿಗಳ ಕಛೇರಿ, ಬೆಂಗಳೂರು.**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಹನುಮಂತನಗರ ಪೊಲೀಸ್ ಠಾಣೆಯಲ್ಲಿ ವಾರಸುದಾರರು ಪತ್ತೆಯಾಗದೆ ಉಳಿದ ಈ ಕೆಳಕಂಡ ವಾಹನಗಳ ಈ ವಿಷಯ ಪ್ರಕಟಣೆಗೊಂಡ 6 ತಿಂಗಳೊಳಗಾಗಿ ತಮ್ಮದೆಂದು ಗುರುತಿಸತಕ್ಕದ್ದು ತಪ್ಪಿದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಮಾಡಲಾಗುವುದು.

**ವಾರಸುದಾರರಿಲ್ಲದ ವಾಹನಗಳ ಮಾಹಿತಿ**

| ಕ್ರ.ಸಂ. | ಎನ್.ಸಿ. ನಂಬರ್ | ಪಿ.ಎಫ್. ನಂಬರ್ | ನೋಂದಣಿ ಸಂಖ್ಯೆ ಮಾದರಿ | ಇಂಜಿನ್ ನಂಬರ್<br>ಚಾಸಿ ನಂಬರ್ |
|---|---|---|---|---|
| 1. | 55/03 | 4 | ಕೆಎ05-ಎಸ್-2468<br>ಸುಜುಕಿ ಸಮುರಾಯ್ | 8509 ಎಂ.590015<br>8509 ಎಫ್ 547730 |
| 2. | 56/03 | 5 | ಕೆಎ02-ಹೆಚ್-2400<br>ಟಿ.ವಿ.ಎಸ್.-50 | ಎ507ಎಂ.116531<br>ಎ.507ಎಫ್ 133360 |
| 3. | 57/03 | 6 | ಕೆಎ04-ಹೆಚ್-7063<br>ಬಜಾಜ್ ಚೇತಕ್ | ಇ06ಸಿಎಂ.312517<br>ಸಿ06ಸಿಎಂ.313087 |
| 4. | 60/03 | 7 | ಕೆಎ05-ಆರ್4596<br>ಸ್ಕೂಟಿಸ್ಪೈಡ್ | 95ಎಚ್ 29014647<br>95ಎಚ್29014396 |

| ಕ್ರ.ಸಂ. | ಎನ್.ಸಿ. ನಂಬರ್ | ಪಿ.ಎಫ್. ನಂಬರ್ | ನೋಂದಣಿ ಸಂಖ್ಯೆ ಮಾದರಿ | ಇಂಜಿನ್ ನಂಬರ್ ಚಾಸಿ ನಂಬರ್ |
|---|---|---|---|---|
| 5. | 61/03 | 8 | ಸಿಎಐ-7602 ಬಜಾಜ್ ಸೂಪರ್ | 05ಇ8306227434 056196760 |
| 6. | 62/03 | 9 | ಕೆಎ05-ವಿ-7343 ಟಿವಿಎಸ್-50 | ಎ610ಎಂ463061 ಎ610ಎಫ್484915 |
| 7. | 63/03 | 10 | ಕೆಎ01ಜೆ-8554 ಟಿವಿಎಸ್-ಎಕ್ಸ್ ಎಲ್ | ಎ410ಎಂ967299 ಎ410ಎಫ್978830 |
| 8. | 64/03 | 11 | ಕೆಎ05-ಇ-7314, ಲೂನಾ | 31033540ಎ 31082241ಎ |
| 9. | 65/03 | 12 | ಕೆಎ02-ಎಲ್3432 ಹಿರೋಪುಕ್ | ಇಬಿ281676 ಸಿಬಿ287503 |
| 10. | 66/03 | 13 | ಕೆಎ05-ಜೆ-9197 ಆರ್ಎಕ್ಸ್-100 ಯಮಹ | ಐಎಲ್ 1350801 ಐಎಲ್ 1350801 |

ದಂಡಾಧಿಕಾರಿಗಳು 1ನೇ ಅಪರ ಮುಖ್ಯ ಮಹಾನಗರ ದಂಡಾಧಿಕಾರಿಗಳ,
ಕಛೇರಿ, ಬೆಂಗಳೂರು.

ಪಿ.ಆರ್. 1096

**ಜಲ ಸಂಪನ್ಮೂಲ ಇಲಾಖೆ**

**ಕಾರ್ಯಪಾಲಕ ಅಭಿಯಂತರವರ ಕಛೇರಿ, ಕೃಷ್ಣರಾಜಸಾಗರ ವಿಭಾಗ, ಕೃಷ್ಣರಾಜಸಾಗರ.**

**ಜ್ಞಾಪನಾ ಪತ್ರ**

**ವಿಷಯ :** ಶ್ರೀಮತಿ ಮೀನಾಕ್ಷಿ, ಲೈಟ್ ಮಜ್ದೂರ್ ಇವರ ಅನಧಿಕೃತ ಗೈರು ಹಾಜರಿ ಬಗ್ಗೆ.

**ಉಲ್ಲೇಖ :**
1. ಸ.ಕಾ.ಇಂ. ನಂ.1 (ನಿ) ಉಪ ವಿಭಾಗ, ಕೃಷ್ಣರಾಜಸಾಗರ ಇವರ ಕಛೇರಿ ಪತ್ರ ಸಂಖ್ಯೆ: 98-99: 605-07 ದಿನಾಂಕ 29.06.98
2. ಈ ಕಛೇರಿ ಪತ್ರ ಸಂಖ್ಯೆ: 98-99:2778-79: ದಿನಾಂಕ: 16.07.98
3. ಈ ಕಛೇರಿ ಪತ್ರ ಸಂಖ್ಯೆ: 98-99:3572-73: ದಿನಾಂಕ: 31.08.98
4. ಈ ಕಛೇರಿ ಪತ್ರ ಸಂಖ್ಯೆ: 98-99:4070-72: ದಿನಾಂಕ: 19.09.98.
5. ಈ ಕಛೇರಿ ಪತ್ರ ಸಂಖ್ಯೆ: 99-2000:3895: ದಿನಾಂಕ: 24.09.99.
6. ಈ ಕಛೇರಿ ಪತ್ರ ಸಂಖ್ಯೆ: 99-2000:5684: ದಿನಾಂಕ: 05.12.2002.
7. ಅಧೀಕ್ಷಕ ಅಭಿಯಂತರು, ಕೃ.ರಾ.ಸಾ. ಆ. ಮತ್ತು ಮ. ನೀ.ಯೋ.ವೃತ್ತ, ಮಂಡ್ಯ ಇವರ ಕಛೇರಿ ಪತ್ರ ಸಂಖ್ಯೆ: 2003-04:1997: ದಿನಾಂಕ: 02.06.2003.

**ಪ್ರಸ್ತಾವನೆ:**

ಈ ವಿಭಾಗ ವ್ಯಾಪ್ತಿಯ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಸಂ.1(ನಿ) ಉಪ ವಿಭಾಗ, ಕೃಷ್ಣರಾಜಸಾಗರ ಇವರು, ಇವರ ಕಛೇರಿಯಲ್ಲಿ ಸೂಪರ್‌ನ್ಯೂಮರರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಶ್ರೀಮತಿ ಮೀನಾಕ್ಷಿ, ಲೈಟ್ ಮಜ್ದೂರ್ ಇವರು ದಿನಾಂಕ: 26.03.98 ರಂದು 4 ದಿವಸಗಳ ಸಾಂದರ್ಭಿಕ ರಜೆಯನ್ನು ಕೋರಿ ನಂತರ ಯಾವುದೇ ಮುನ್ಸೂಚನೆ ಇಲ್ಲದೆ, ರಜೆಯನ್ನೂ ಪಡೆಯದೇ ಕಛೇರಿ ಕೆಲಸಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುತ್ತಾರೆಂದು ಉಲ್ಲೇಖ (1)ರ ಪತ್ರದಲ್ಲಿ ವರದಿ ಮಾಡಿದ್ದರು.

ಶ್ರೀಮತಿ ಮೀನಾಕ್ಷಿ, ಲೈಟ್ ಮಜ್ದೂರ್ ಇವರಿಗೆ ಇವರ ಕೃಷ್ಣರಾಜಸಾಗರದ ಸಬಾರ್ಡಿನೇಟ್ ಕಾಲೋನಿಯಲ್ಲಿರುವ ಸರ್ಕಾರಿ ವಸತಿ ಗೃಹದ ವಿಳಾಸಕ್ಕೆ, ಕೆಲಸಕ್ಕೆ ಹಾಜರಾಗುವಂತೆ ಉಲ್ಲೇಖ(2) ರಿಂದ (4) ರಲ್ಲಿ ನೋಂದಣಿ ಅಂಚೆ ಸ್ವೀಕೃತಿ ಮುಖಾಂತರ ತಿಳುವಳಿಕೆ ಪತ್ರಗಳನ್ನು ಕಳುಹಿಸಲಾಗಿತ್ತು. ಸದರೀ ಪತ್ರಗಳು ವಿಳಾಸದಾರರು ವಿತರಣೆಯ ಸಂದರ್ಭದಲ್ಲಿ ಮನೆಯಲ್ಲಿ ಲಭ್ಯವಿರಲಿಲ್ಲ ಹಾಗೂ ಮನೆ ಬೀಗ ಹಾಕಲಾಗಿತ್ತು ಎಂಬ ಷರಾದೊಂದಿಗೆ ವಾಪಸ್ಸು ಬಂದಿರುತ್ತದೆ. ಹಾಗೂ ಉಲ್ಲೇಖ (1)ರ ಪತ್ರದಲ್ಲಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ಸಹಾ ತಿಳುವಳಿಕೆ ಪತ್ರವನ್ನು ನೌಕರರ ಮನೆ ವಿಳಾಸಕ್ಕೆ ಕಳುಹಿಸಿದ್ದು, ನೌಕರರು ಇದಕ್ಕೆ ಸ್ಪಂದಿಸಿರುವುದಿಲ್ಲ. ಮುಂದುವರೆದು ಈ ಕಛೇರಿಯಿಂದ ನೌಕರರಿಗೆ ಕರ್ತವ್ಯಕ್ಕೆ ಹಾಜರಾಗುವಂತೆ ದಿನಾಂಕ: 25.06.99 ದಿನಾಂಕ: 26.6.99 ರ 'ಉದಯವಾಣಿ' ಹಾಗೂ ದಿನಾಂಕ: 29.6.99ರ 'ಪ್ರಜಾವಾಣಿ' ಕನ್ನಡ ದಿನಪತ್ರಿಕೆಗಳಲ್ಲಿ ಪ್ರಕಟಣೆ ಪ್ರಕಟಗೊಳಿಸಲಾಗಿತ್ತು. ಆದಾಗ್ಯೂ ನೌಕರರು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಸದರೀ ನೌಕರರು ಇದ್ಯಾವುದಕ್ಕೂ ಸ್ಪಂದಿಸದೇ ಇದ್ದದ್ದರಿಂದ ಇವರ ಅನಧಿಕೃತ ಗೈರು ಹಾಜರಾತಿಯ ಬಗ್ಗೆ ದಿನಾಂಕ: 14.10.99 ರಂದು ಇಲಾಖಾ ವಿಚಾರಣೆಯನ್ನು ನಡೆಸಲು ಉದ್ದೇಶಿಸಲಾಗಿತ್ತು. ಸದರೀ ಇಲಾಖಾ ವಿಚಾರಣೆಗೆ ಹಾಜರಾಗುವಂತೆ ತಿಳಿಸಿ ದಿನಾಂಕ: 30.09.99ರ 'ಉದಯವಾಣಿ' ಮತ್ತು 'ಪ್ರಜಾವಾಣಿ' ಕನ್ನಡ ದಿನಪತ್ರಿಕೆಗಳಲ್ಲಿ ಪ್ರಕಟಣೆ ನೀಡಲಾಗಿತ್ತು. ಹಾಗೂ ಇಲಾಖಾ ವಿಚಾರಣೆಗೆ ಹಾಜರಾಗುವಂತೆ ತಿಳಿಸಿ ಕಾರಣ ಕೇಳುವ ನೋಟಿಸಿನೊಂದಿಗೆ ಅನುಬಂಧ-1 ರಿಂದ 4

ರವರೆಗಿನ ದೋಷಾರೋಪಣಾ ಪಟ್ಟಿಗಳನ್ನು ಉಲ್ಲೇಖ (5)ರ ಪತ್ರದಲ್ಲಿ ನೌಕರರ ಮನೆ ವಿಳಾಸಕ್ಕೆ ಈ ಕಛೇರಿಯ 'ಡಿ' ಗ್ರೂಪ್ ನೌಕರರ ಮುಖಾಂತರ 'ಮುದ್ದಾಂ' ಕಳುಹಿಸಲಾಗಿತ್ತು. ವಿಳಾಸದಾರರು ಮನೆಯಲ್ಲಿ ಲಭ್ಯರಿರಲಿಲ್ಲವೆಂದು ವಿತರಣೆಯಾಗದೇ ಆ ಪತ್ರವು ವಾಪಸ್ಸು ಬಂದಿರುತ್ತದೆ. ಹಾಗೂ ನೌಕರರಿಗೆ ಅನಧಿಕೃತ ಗೈರು ಹಾಜರಾಗಿರುವ, ಇಲಾಖಾ ವಿಚಾರಣೆಗೆ ಹಾಜರಾಗದಿರುವ ವರ್ತನೆಗಳ ಆಧಾರದ ಮೇಲೆ ಕೆಲಸದಿಂದ ವಜಾ ಮಾಡಲು ಉದ್ದೇಶಿಸಲಾಗಿದೆಯೆಂದು ದಿನಾಂಕ: 29.11.99ರ 'ಉದಯವಾಣಿ' ಮತ್ತು ದಿನಾಂಕ: 30.11.99ರ 'ಪ್ರಜಾವಾಣಿ' ಕನ್ನಡ ದಿನಪತ್ರಿಕೆಗಳಲ್ಲಿ, ಕರ್ನಾಟಕ ರಾಜ್ಯ ಪತ್ರಗಳಲ್ಲಿ ಪ್ರಕಟಣೆ ನೀಡಲಾಗಿತ್ತು. ಇದಕ್ಕೆ ಅವರು ಯಾವುದೇ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿರುವುದಿಲ್ಲ.

ಮುಂದುವರೆದು ಮತ್ತೊಮ್ಮೆ ದಿನಾಂಕ: 23.12.2002 ರಂದು ಇಲಾಖಾ ವಿಚಾರಣೆಯನ್ನು ನಡೆಸಲು ಉದ್ದೇಶಿಸಲಾಗಿತ್ತು. ಸದರೀ ಇಲಾಖಾ ವಿಚಾರಣೆಗೆ ಹಾಜರಾಗುವಂತೆ ತಿಳಿಸಿ ದಿನಾಂಕ: 5.12.2002ರ 'ಕರ್ನಾಟಕ ರಾಜ್ಯ ಪತ್ರ' ದಿನಾಂಕ: 20.12.02ರ 'ಕನ್ನಡ ಪ್ರಭ' ಕನ್ನಡ ದಿನಪತ್ರಿಕೆಯಲ್ಲಿ ಪ್ರಕಟಣೆ ಪ್ರಕಟಗೊಳಿಸಲಾಗಿತ್ತು. ಹಾಗೂ ಇಲಾಖಾ ವಿಚಾರಣೆಗೆ ಹಾಜರಾಗುವಂತೆ ತಿಳಿಸಿ, ಕಾರಣ ಕೇಳುವ ನೋಟೀಸ್‌ನೊಂದಿಗೆ ಅನುಬಂಧ-1 ರಿಂದ 4 ರವರೆಗಿನ ದೋಷಾರೋಪಣಾ ಪಟ್ಟಿಗಳನ್ನು ಉಲ್ಲೇಖ(6)ರ ಪತ್ರದಲ್ಲಿ ನೌಕರರ ಮನೆ ವಿಳಾಸಕ್ಕೆ 'ನೋಂದಣಿ ಅಂಚೆ ಸ್ವೀಕೃತಿ' ಮುಖಾಂತರ ಕಳುಹಿಸಲಾಗಿತ್ತು. ಸದರೀ ಪತ್ರವು ವಿಳಾಸದಾರರು ಕೃಷ್ಣರಾಜಸಾಗರದಲ್ಲಿ ಹಾಲಿ ಇರುವುದಿಲ್ಲವೆಂಬ ಷರಾದೊಂದಿಗೆ ವಿತರಣೆಯಾಗದೇ ವಾಪಸ್ಸು ಬಂದಿರುತ್ತದೆ. ಸದರೀ ನೌಕರರು ಈ ಕಛೇರಿಯಿಂದ ಕೈಗೊಂಡಿರುವ ಯಾವುದೇ ಕ್ರಮಗಳಿಗೂ ಈವರೆವಿಗೂ ಸ್ಪಂದಿಸಿರುವುದಿಲ್ಲ. ಅಲ್ಲದೇ ಯಾವುದೇ ರೀತಿಯ ಲಿಖಿತ ಉತ್ತರವಾಗಲೀ ಅಥವಾ ಮೌಖಿಕವಾಗಿಯಾಗಲೀ ಈ ಕಛೇರಿಯನ್ನು ಸಂಪರ್ಕಿಸಿರುವುದಿಲ್ಲ. ಈ ಎಲ್ಲಾ ಅಂಶಗಳಿಂದ ಸದರೀ ನೌಕರರು ಸರ್ಕಾರಿ ನೌಕರರಿಗೆ ಇರಬೇಕಾದ ತಕ್ಕ ಕರ್ತವ್ಯ ನಿಷ್ಠೆಯನ್ನು ಹೊಂದಿರದೇ ಇರುವುದು ಹಾಗೂ ಕರ್ತವ್ಯದಲ್ಲಿ ಮುಂದುವರೆಯಲು ಆಸಕ್ತಿ ಹೊಂದಿಲ್ಲವೆಂಬುದನ್ನು ತೋರಿಸುತ್ತದೆ. ಅಲ್ಲದೇ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವ, ಇಲಾಖಾ ವಿಚಾರಣೆಗೆ ಹಾಜರಾಗದೇ ಇರುವ ಅವರ ನಡೆತೆಯು ಜವಾಬ್ದಾರಿಯುತ ಸ್ಥಾನಕ್ಕೆ ಅನುಚಿತವಾಗಿದ್ದು, ಸರ್ಕಾರಿ ನೌಕರರಿಗೆ ಸಲ್ಲದ ರೀತಿಯದಾಗಿರುತ್ತದೆ. ಹಾಗೂ ಸದರೀ ನೌಕರರನ್ನು ಕೆಲಸದಿಂದ ತೆಗೆದುಹಾಕುವ ಕ್ರಮ ಕೈಗೊಳ್ಳಲು ಉಲ್ಲೇಖ (7)ರ ಪತ್ರದಲ್ಲಿ ಅಧೀಕ್ಷಕ ಅಭಿಯಂತರು ಅನುಮೋದನೆಯನ್ನು ನೀಡಿರುತ್ತಾರೆ.

**ಆದೇಶ ಸಂಖ್ಯೆ: ಕಾ೪ಂ: ಕೃರಾಸಾವಿ:ಸಿ-2: ಲೈ.ಮ:ಅ.ಗೈ.ಹಾ.03-04**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸೇವಾನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮದನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರೀ ನಿಯಮಗಳ ನಿಯಮ (8) ರನ್ವಯ, ಕರ್ನಾಟಕ ನಾಗರೀಕ ಸೇವಾ ನಿಯಮ 108 ರನ್ವಯ, ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ:18:ಸೇಇವಿ:2001:ದಿನಾಂಕ: 14.09.2001ರ ನಿರ್ದೇಶನಗಳಂತೆ ಹಾಗೂ ಉಲ್ಲೇಖ (7)ರ ಅಧೀಕ್ಷಕ ಅಭಿಯಂತರರವರ ಅನುಮೋದನೆಯ ಮೇರೆಗೆ ಶ್ರೀಮತಿ ಮೀನಾಕ್ಷಿ ಲೈಟ್ ಮಜ್ದೂರ್ (ಸೂಪರ್ ನ್ಯೂಮರರಿ ಹುದ್ದೆ) ಇವರನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ತೆಗೆದುಹಾಕಲಾಗಿದೆ. ಸದರಿ ನೌಕರರು ಸರ್ಕಾರಿ ಸೇವಾ ಅನಧಿಕೃತ ಗೈರು ಹಾಜರಾಗಿರುವ ಅವಧಿಯನ್ನು ಅನಧಿಕೃತ ಗೈರು ಹಾಜರಿಯಿಂದೇ ಪರಿಗಣಿಸಿದೆ.

ಕಾರ್ಯಪಾಲಕ ಅಭಿಯಂತರು,
ಕೃಷ್ಣರಾಜಸಾಗರ ವಿಭಾಗ, ಕೃಷ್ಣರಾಜಸಾಗರ.

ಪಿ.ಆರ್. 1097

**KARNATAKA STATE BAR COUNCIL, OLD K.G.I.D. BLDG., BANGALORE-1**
**No. KSBC/1587/03/ Dated:15th September 2003**

**Sub :** Election of Chairman.

This is to inform you that SHRI. H. C. SHIVARAMU, Advocate, Bangalore has been elected as CHAIRAMAN of the Bar Council in the election held on 14th September. 2003

| **ADDRESS** | **PHONE NUMBERS** |
|---|---|
| Shri. H.C. Shivaramu | Off: 2267230 |
| Advocate, | Res: 3408424 |
| No. 227, Ground Floor, 53rd Cross 6th Main, | Mobile:9845344863 |
| 4th Block, Rajajinagar, Bangalore-560 010. | |

Yours Faithfully,
**M.P. JAKATY**
Secretary.

**KARNATAKA STATE BAR COUNCIL, OLD K.G.I.D. BLDG., BANGALORE-1**
**NOTIFICATION No. 8/2003 Dated:14th September 2003**

As per Rule 12 of "The Karnataka State Bar Council (Election of Chairman) Rules 1978", it is declared that the following Member of the Council has been elected to the Office of the Chairman.

Shri. H.C. Shivaramu
Advocate,
No. 227, Ground Floor, 53rd Cross 6th Main,
4th Block, Rajajinagar, Bangalore-560 010.
**PHONE :** Office: 2267230,
Residence: 3408424
Mobile: 9845344863

**M.P. JAKATY**
Returning Officer, K.S.B.C., B'Lore-1.

PD-93

**ಸೂಪರಿಂಟೆಂಡಿಂಗ್ ಇಂಜನೀಯರ್ ಜಲ ಸಂಪನ್ಮೂಲ, ಇಲಾಖೆ.**

**ನೀರಾವರಿ ಯೋಜನೆ ನಿರ್ಮಾಣ, ವೃತ್ತ, ಬೀದರ್**

**ಅಧಿಸೂಚನೆ ಕ್ರ.ಸ.ಸೂ.ಇ/ಐ.ಪಿ.ಸಿ.ಸಿ/ಬೀದರ್/ಎಇ-1/ ಅಧಿಸೂಚನೆ/03-04**

**(ನೀರಾವರಿ ಕಾಯ್ದೆ ಸೆಕ್ಷೆನ್-2 (ಎಸ್) ಪ್ರಕಾರ)**

ಸರಕಾರಿ ಅಧಿಸೂಚನೆ ಸಂ: ಐ.ಡಿ-16-ಎನ್.ಪಿ.ಸಿ/2000 (ಪಿ) ದಿನಾಂಕ: 19.02.2001 ರ ಸರಕಾರದ ಅಧಿಸೂಚನೆಯಂತೆ ದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಅಂಕಣ 3 ಹಾಗೂ 4 ರಲ್ಲಿ ತೋರಿಸಿರುವ ನೀರಾವರಿ ಕ್ಷೇತ್ರಕ್ಕೆ ನೀರು ಬಳಕೆದಾರರ ಸಂಘ ಸ್ಥಾಪಿಸಲು ಅಧಿಸೂಚನೆ ಹೊರಡಿಸಲಾಗಿದೆ.

**ತಖ್ತೆ**

**ಯೋಜನೆಯ ಹೆಸರು: ಮೇಲ್ದಂಡೆ ಮುಲ್ಲಾಮಾರಿ ಯೋಜನೆ**

| ಕ್ರ.ಸಂ. ನಿ.ಬ. ಸಂಘ | ವಿತರಣಾ ಕಾಲುವೆ, ಉಪ ವಿತರಣಾ ಕಾಲುವೆ, ಮೈನರ್ ಲ್ಯಾಟರಲ್, ನೇರ ಪೈಪ್ ಔಟ್‌ಲೆಟ್‌ಗಳ ಹೆಸರು | ನೀರಾವರಿಯಾಗುವಂತಹ ಕ್ಷೇತ್ರ ಹಾಗೂ ಅದರ ಅಪರೇಷನ್ | |
|---|---|---|---|
| | | ಹಳ್ಳಿಯ ಹೆಸರು | ನೀರಾವರಿಯಾಗುವಂತಹ ಕ್ಷೇತ್ರ ಎಕರೆಗಳಲ್ಲಿ |
| 1 | 2 | 3 | 4 |
| 1 | ಬಲದಂಡೆ ಕಾಲುವೆ | | **ಎ-ಗು** |
| | ವಿತರಣಾ ಕಾಲುವೆ ಸಂ.1,1(ಎ),2, 2(ಎ), 3,4,5,6,6 (ಎ),7, 7(ಎ), 8,9,10,11,11(ಎ), 12,13,14 ಮತ್ತು 15 | 1. ಖೇರಡಾ(ಬಿ).<br>2. ಡೊಂಗರಗಾಂವ<br>3. ಧನ್ನೂರಾ (ಆರ್) | 386-34<br>37-30<br>248-28 |
| | | **ಒಟ್ಟು** | **673-12** |
| 2 | ಎಡದಂಡೆ ಕಾಲುವೆ | | |
| | ವಿತರಣಾ ಕಾಲುವೆ 1,2,3,4,5,6,7,8, 8(ಎ), 9,10,11,12,13, 14,15 ಮತ್ತು 16 | 1. ಖೇರಡಾ(ಬಿ)<br>2. ಧನ್ನೂರಾ (ಆರ್) | 268-17<br>457-26 |
| | | **ಒಟ್ಟು** | **727-03** |
| 3 | ಎಡದಂಡೆ ಕಾಲುವೆ | | |
| | ವಿತರಣಾ ಕಾಲುವೆ 17, 18, 19, 20, 21,22, 23, 24, 25, 26, 27, 28, 29, 30,ಮತ್ತು 31 | 1. ಖೇರಡಾ(ಕೆ)<br>2. ಚಿತಕೋಟಾ<br>3. ಗೊಬರವಾಡಿ | 559-03<br>105-25<br>213-25 |
| | | **ಒಟ್ಟು** | **878-13** |
| 4 | ಬಲದಂಡೆ ಕಾಲುವೆ | | |
| | ವಿತರಣಾ ಕಾಲುವೆ, 16, 17, 18, 19, 20, 21, 22, 23, 24, 25, 26, 27, 28, 29, 30, 31, 32, 33, 34, 35, 36, 37, 38, 39 ಮತ್ತು 40. | 1. ಸಡಕ ಕಿನ್ನಿ<br>2. ಧೋರ್ ಜಂಬಗಾ<br>3. ಹೊನ್ನಳ್ಳಿ<br>4. ಮರಮಂಚಿ | 351-24<br>577-26<br>430-36<br>80-28 |
| | | **ಒಟ್ಟು** | **1440-30** |
| 5 | ಬಲದಂಡೆ ಕಾಲುವೆ | | |
| | ವಿತರಣಾ ಕಾಲುವೆ 41, 42, 43, 44, 45, 46, 47, 48, 51 ಮತ್ತು 52 | 1. ಸೊಂತ | 1013-14 |
| | | **ಒಟ್ಟು** | **1013-14** |
| 6 | ಬಲದಂಡೆ ಕಾಲುವೆ | | |
| | ವಿತರಣಾ ಕಾಲುವೆ 53, 54, 55, 56, 57, 58, 59, 60, 61, 62 ಮತ್ತು 63. | 1. ಸೊಂತ | 733-04 |
| | | **ಒಟ್ಟು** | **733-04** |

ಸೂಪರಿಂಟೆಂಡಿಂಗ್ ಇಂಜನೀಯರ್ ಜ.ಸ.ಇ.

ಪಿ.ಆರ್. 1098 ನೀರಾವರಿ ಯೋಜನೆ ನಿರ್ಮಾಣ ವೃತ್ತ, ಬೀದರ್.

**ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆ, ಧನ್ವಂತರಿ ರಸ್ತೆ, ಬೆಂಗಳೂರು- 560-009.**

**ಪ್ರಕಟಣೆ**

**ಸಂಖ್ಯೆ:ಭಾವೈಪ:20:ಅಂಕಿಅಂಶ(1):2003-04 ದಿನಾಂಕ: 8ನೇ ಸೆಪ್ಟೆಂಬರ್ 2003**

ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮೀಯೋಪತಿ ವೈದ್ಯಪದ್ಧತಿಗಳಲ್ಲಿ ಗಣನೀಯ ಸೇವೆ ಸಲ್ಲಿಸುತ್ತಿರುವ 6 ಜನ ವೈದ್ಯರುಗಳಿಗೆ (ಆಯುರ್ವೇದ-3 ಹಾಗೂ ಯುನಾನಿ ಹೋಮಿಯೋಪತಿ, ಪ್ರಕೃತಿ ಚಿಕಿತ್ಸೆ: ಯೋಗ ವೈದ್ಯಪದ್ಧತಿಗಳ ತಲಾ ಒಬ್ಬ ವೈದ್ಯರಿಗೆ) ರೂ:250-00ಗಳ ಮಾಸಿಕ ಪಿಂಚಣಿಯನ್ನು 2003-04ನೇ ಸಾಲಿನಲ್ಲಿ ನೀಡಿ ಗೌರವಿಸಲು ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅರ್ಜಿದಾರರು, ನೊಂದಾಯಿತ ವೈದ್ಯ ವೃತ್ತಿದಾರರಾಗಿದ್ದು, 60 ವರ್ಷಗಳನ್ನು ಪೂರೈಸಿ, ವೈದ್ಯವೃತ್ತಿಯಲ್ಲಿ ಗಣನೀಯ ಸೇವೆ ಸಲ್ಲಿಸಿರುವಿಕೆ, ಸಂಸ್ಥೆಗಳ ಸ್ಥಾಪನೆ ವೈದ್ಯಕೀಯ ಉಚಿತ ಸೇವೆ ನೀಡುವಿಕೆ, ಸಂಶೋಧನೆ, ಪುಸ್ತಕ ಪ್ರಕಟಣೆ, ಯಾವುದೇ ಮೂಲದಿಂದ ಆದಾಯವಿಲ್ಲದಿರುವ ಅಂಶಗಳನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುವುದು.

ನಿಗದಿತ ಅರ್ಜಿ ಫಾರಂಗಳನ್ನು ಆಯಾ ಜಿಲ್ಲೆಗಳ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಛೇರಿಗಳಲ್ಲಿ ಮತ್ತು ಈ ಕೆಳಕಂಡ ವಿಳಾಸಗಳಲ್ಲಿರುವ ಭಾರತೀಯ ವೈದ್ಯ ಪದ್ಧತಿಗಳು ಮತ್ತು ಹೋಮಿಯೋಪತಿ ವಿಭಾಗೀಯ ಕಛೇರಿಗಳಲ್ಲಿ ಪಡೆಯಬಹುದು.

1. ಧನ್ವಂತರಿ ರಸ್ತೆ, ಬೆಂಗಳೂರು-560009.
2. ಸಯಾಜಿರಾವ್ ರಸ್ತೆ, ಮೈಸೂರು-570027.
3. ವಿಶ್ವೇಶ್ವರ ನಗರ, ಬೆಳಗಾಂ.
4. ಅತ್ತರ್ ಕಾಂಪೌಂಡ್, ಗಾಜೀಪುರ, ಗುಲ್ಬರ್ಗಾ-565101.
5. ಜಿಲ್ಲಾ ಆಯುರ್ವೇದ ಆಸ್ಪತ್ರೆಗಳು ಬಾಗಲಕೋಟೆ: ಬಳ್ಳಾರಿ ಬೀದರ್: ಬಿಜಾಪುರ: ಚಾಮರಾಜನಗರ: ಗದಗ: ಗುಲ್ಬರ್ಗ: ಹಾಸನ ಹಾವೇರಿ: ಹುಬ್ಬಳ್ಳಿ: ಕಡೂರು: ಕಾರವಾರ: ಕೋಲಾರ: ಕೊಪ್ಪಳ: ಮಂಗಳೂರು: ಮಂಡ್ಯ: ರಾಯಚೂರು ಶಿವಮೊಗ್ಗ: ತುಮಕೂರು.
6. ಸರ್ಕಾರಿ ಪ್ರಕೃತಿ ಚಿಕಿತ್ಸಾಲಯ, ದಾವಣಗೆರೆ.

ಇದಲ್ಲದೆ, ಬೆಂಗಳೂರು, ಮೈಸೂರು, ಬಳ್ಳಾರಿಯಲ್ಲಿರುವ ಸರ್ಕಾರಿ ಆಯುರ್ವೇದ ಮಹಾವಿದ್ಯಾಲಯಗಳು ಸೇರಿದಂತೆ, ಬೆಂಗಳೂರಿನ ಯುನಾನಿ: ಹೋಮಿಯೋಪತಿ ಮಹಾ ವಿದ್ಯಾಲಯಗಳ ಪ್ರಾಚಾರ್ಯರ ಕಛೇರಿಗಳಲ್ಲಿ ದೊರೆಯುವುದು.

ಪೂರ್ಣವಾಗಿ ಭರ್ತಿ ಮಾಡಿದ ಅರ್ಜಿಗಳನ್ನು ವಯಸ್ಸಿನ ದಾಖಲೆಯ ದೃಢೀಕರಣ ಪ್ರತಿಗಳು, ವೈದ್ಯರ ವೃತ್ತಿಯ ರಿಜಿಸ್ಟ್ರೇಷನ್ ಸರ್ಟಿಫಿಕೇಟ್‌ನ ಪ್ರತಿ ಹಾಗೂ ವೈದ್ಯಕೀಯ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿರುವ ಬಗ್ಗೆ ಸರ್ಕಾರ ಹಾಗೂ ಇನ್ನಿತರ ಸಂಘ ಸಂಸ್ಥೆಗಳಿಂದ ಬಂದಿರುವ ಪ್ರಮಾಣ ಪತ್ರಗಳು ಇತ್ಯಾದಿಗಳೊಂದಿಗೆ ನೇರವಾಗಿ ನಿರ್ದೇಶಕರು, ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ನಿರ್ದೇಶನಾಲಯ, ಧನ್ವಂತರಿ ರಸ್ತೆ, ಬೆಂಗಳೂರು ಇವರಿಗೆ ದಿನಾಂಕ: 18.10.2003ರ ಒಳಗಾಗಿ ತಲುಪುವಂತೆ ಕಳುಹಿಸಲು ಕೋರಲಾಗಿದೆ.

ನಿರ್ದೇಶಕರು,

ಪಿ.ಆರ್. 1099

ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮೀಯೋಪತಿ
ನಿರ್ದೇಶನಾಲಯ, ಬೆಂಗಳೂರು.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ವಿಜಾಪೂರ ಜಿಲ್ಲೆ, ಇವರ ನಡುವಳಿಗಳು**

**ಪ್ರಥಮ ಮಾಹಿತಿ ವರದಿ ನಂ: 2: ವಿಜಾಪೂರ: ಉಪವಿಭಾಗ:57:2002-03 ದಿನಾಂಕ: 21ನೇ ಡಿಸೆಂಬರ್ 2002**

**ಪಿರ್ಯಾಧಿದಾರರು :** ಅಬಕಾರಿ ಉಪ ನಿರೀಕ್ಷಕರು ವಿಜಾಪೂರ ಉಪವಿಭಾಗ

**ಆರೋಪಿತರು :** ಪರಾರಿಯಾಗಿರುವವರು ವಾಹನದ ನಂ: ಎಂಇಐ: 8970 ಲೂನಾ ಟಿಎಫ್ಆರ್

**ಪ್ರಸ್ತಾವನೆ:**

ದಿನಾಂಕ: 21.12.2002 ರಂದು ರಾತ್ರಿ 9-00 ಗಂಟೆಯ ಸಮಯದಲ್ಲಿ ವಿಜಾಪೂರ ಶಹರದ ರಾಷ್ಟ್ರೀಯ ಹೆದ್ದಾರಿ 13ರ ಮೇಲೆ ಇರುವ ಇಂಡಿಯನ್ ಆಯಿಲ್ ಕಂಪನಿಯ ಪಂಪಿನ ಬಲಗಡೆಯಲ್ಲಿರುವ ಒಣಯಲ್ಲಿ ವಾರಸುದಾರರು ಇಲ್ಲದ ಒಂದು ರಟ್ಟಿನ ಪೆಟ್ಟಿಗೆಯಲ್ಲಿ 48 ಬಾಟ್ಲಿಗಳು ಒಟ್ಟು 8.640 ಲೀ. ಮದ್ಯದ ಬಾಟ್ಲಿಗಳು ರಾಯಲ್ ಗೋಲ್ಡ್ ಕಪ್ ವಿಸ್ಕಿ ಪತ್ತೆ ಮಾಡಿ ಸಾಗಾಣಿಕೆಗೆ ಮಾಡಲು ಉಪಯೋಗಿಸಿದ ಒಂದು ಕರಿ ಬಣ್ಣದ ಲೂನಾ ಟಿಎಫ್ಆರ್ ನೋಂದಣೆ ನಂ: ಎಂಇಐ: 8970 ವಾಹನವನ್ನು ಪಂಚನಾಮಾ ಕ್ರಮವನ್ನು ಜರುಗಿಸಿ ರಾಸಾಯನಿಕ ತಜ್ಞರ ಪರೀಕ್ಷೆಗೆ ತೆಗೆದು ದೊರೆತ ಮುದ್ದೇಮಾಲನ್ನು ಮತ್ತು ವಾಹನದ ನಂ:ಎಂಇಐ: 8970 ವಾಹನವನ್ನು ವಶಪಡಿಸಿಕೊಂಡು ಪಿರ್ಯಾಧಿದಾರರು ಪ್ರಥಮ ಮಾಹಿತಿ ವರದಿ ನಂ:57: 2002-03, ದಿನಾಂಕ: 21.12.2002 ರಂತೆ ಮೊಕದ್ದಮೆ ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ಪ್ರಥಮ ಮಾಹಿತಿ ವರದಿ ಪಂಚನಾಮಾ ಪ್ರತಿ, ರಸಾಯನಿಕ ತಜ್ಞರ ವರದಿಯನ್ನು ನೀಡಿರುತ್ತಾರೆ. ರಾಸಾಯನಿಕ ತಜ್ಞರ ವರದಿ ನಂ:822:2003, ದಿನಾಂಕ: 10.2.2003 ರ ವರದಿಯನ್ನು ಅವಲೋಕಿಸಲಾಗಿ ಜಪ್ತು ಮಾಡಿದ ರಾಯಲ್ ಗೋಲ್ಡ್ ಕಪ್ ವಿಸ್ಕಿ ಮಾದರಿ ಸೀಸೆಯನ್ನು ವಿಶ್ಲೇಷಣಾ ವರದಿಯಂತೆ 25.6 ಯು.ಪಿ. ಇದ್ದು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ವಿಶ್ಲೇಷಣಾಕಾರರು ವರದಿ ನೀಡಿರುತ್ತಾರೆ. ಈ ಕಾರಣಗಳಿಂದ ಸಾಗಾಣಿಕೆ ಮಾಡಿದ ಬಾಟ್ಲಿಗಳಲ್ಲಿ ಮಾದಕ ದ್ರವ್ಯದ ಅಂಶ ದೃಢಪಟ್ಟಿರುತ್ತದೆ. ಇಲಾಖೆಯಿಂದ ರಹದಾರಿ ಪತ್ರ ಇಲ್ಲದೆಯೇ ಸಾಗಾಣಿಕೆ ಮಾಡುವುದು ಅಬಕಾರಿ ಕಾಯ್ದೆ 1965 ರ ಕಲಂ 12 ಮತ್ತು 14 ಕ್ಕೆ ವಿರುದ್ಧವಾಗಿದ್ದು ಸದರಿ ಪ್ರಕರಣದಲ್ಲಿ ಜಪ್ತು ಮಾಡಿದ ಮಾದಕ ದ್ರವ್ಯದ ಬಾಟ್ಲಿಗಳು ಮತ್ತು ಜಪ್ತು ಮಾಡಿದ ವಾಹನ ಎಂಇಐ: 8970 ವಾಹನವನ್ನು ರಾಜ್ಯ

ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಉಚಿತವೆಂದು ಕಂಡು ಬಂದಿರುತ್ತದೆ. ಕಾರಣ ಗುನ್ಹೆ ದಾಖಲಾದ ಹಲವು ತಿಂಗಳುಗಳು ಕಳೆದರೂ ಜಪ್ತು ಮಾಡಿದ ಮಾದಕ ದ್ರವ್ಯದ ಬಾಟ್ಲಿಗಳ ಮೇಲಾಗಲೀ ಅಥವಾ ಜಪ್ತು ಮಾಡಿದ ಸಾಗಾಣಿಕೆಗೆ ಉಪಯೋಗಿಸಿದ ವಾಹನದ ನಂಬರ್:ಎಂಇಐ:8970 ವಾಹನದ ಬಗ್ಗೆ ಯಾರೇ ಆಗಲೀ ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಹಕ್ಕನ್ನು ಸ್ಥಾಪಿಸಿರುವುದಿಲ್ಲ. ಆದ್ದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶದ ನಂಬರ್: ಇಎಕ್ಸ್‌ಇ: ಡಿಟಿಸಿಆರ್: 290: 2002-03/ 912 ದಿನಾಂಕ: 24ನೇ ಜುಲೈ 2003**

ಕೆ. ಆರ್. ಗೋವಿಂದಶೆಟ್ಟಿ, ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ಮತ್ತು ಅಧಿಕೃತ ಅಧಿಕಾರಿಗಳು ವಿಜಾಪೂರ ಜಿಲ್ಲೆ ವಿಜಾಪೂರ ಆದ ನಾನು, ನನಗೆ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಪಿರ್ಯಾಧಿದಾರರು ಪ್ರಥಮ ಮಾಹಿತಿ ವರದಿ ನಂ: ಅಉನೀ:2:ವಿಜಾಪೂರ ಉಪವಿಭಾಗ:57:2002-03, ದಿನಾಂಕ: 21.12.2002 ರಲ್ಲಿ ಜಪ್ತು ಮಾಡಿದ 180 ಮಿಲಿಯ 48 ರಾಯಲ್ ಗೋಲ್ಡ್ ಕಪ್ ವಿಸ್ಕಿಯ ಬಾಟ್ಲಿಗಳು ಶ್ಯಾಂಪಲ್ ಬಾಟ್ಲಿಗಳನ್ನು ಹೊರತುಪಡಿಸಿ ಜಪ್ತು ಮಾಡಿದ ಮೊಪೆಡ್ ವಾಹನದ ನಂ:ಎಂಇಐ: 8970 ವಾಹನವನ್ನು ರಾಜ್ಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶವನ್ನು ಈ ಮೂಲಕ ನೀಡಿದ್ದೇನೆ.

ಈ ಪ್ರಕರಣದಲ್ಲಿ ಜಪ್ತು ಮಾಡಿದ ಮಾದಕ ದ್ರವ್ಯದ ಬಾಟ್ಲಿಗಳಲ್ಲಿ ಶ್ಯಾಂಪಲ್ ಬಾಟ್ಲಿಗಳನ್ನು ಹೊರತುಪಡಿಸಿ ಉಳಿದ ಬಾಟ್ಲಿಗಳನ್ನು ನಿಯಮಗಳ ಅನುಸಾರ ವಿಲೇ ಮಾಡಲು ಅಬಕಾರಿ ನಿರೀಕ್ಷಕರು ವಿಜಾಪೂರ ವಲಯ ಇವರಿಗೆ ಸೂಚನೆ ನೀಡಲಾಗಿದೆ. ಮತ್ತು ಅಪೀಲು ಅವಧಿ ಮುಗಿದ ನಂತರ ಈ ಪ್ರಕರಣದಲ್ಲಿ ಜಪ್ತು ಮಾಡಿ ಮುಟ್ಟುಗೋಲು ಹಾಕಿಕೊಂಡ ವಾಹನವನ್ನು ಅಪೀಲು ಅವಧಿ ಮುಗಿದ ನಂತರ ಬಹಿರಂಗ ಹರಾಜು ಮೂಲಕ ವಿಲೇ ಮಾಡಲು ಅಬಕಾರಿ ನಿರೀಕ್ಷಕರು ವಿಜಾಪೂರ ವಲಯ ಇವರಿಗೆ ಸೂಚಿಸಲಾಗಿದೆ.

ಈ ಆದೇಶವನ್ನು ದಿನಾಂಕ: 24.7.2003 ರಂದು ಈ ಆದೇಶವನ್ನು ಬೆರಳಚ್ಚು ಮಾಡಿಸಿ ನನ್ನ ಸಹಿ, ಮೊಹರು ಹಾಕಿ ನೀಡಲಾಗಿದೆ.

ಅಧಿಕೃತ ಅಧಿಕಾರಿ ಹಾಗೂ
ಪಿ.ಆರ್. 1100 ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ವಿಜಾಪೂರ,
ಜಿಲ್ಲೆ, ವಿಜಾಪುರ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ವಿಜಾಪೂರ ಜಿಲ್ಲೆ,**
**ವಿಜಾಪೂರ ಇವರ ನ್ಯಾಯಾಲಯದ ನಡುವಳಿಗಳು**
**ಪ್ರಥಮ ಮಾಹಿತಿ ವರದಿ ನಂ:67:2002 ದಿನಾಂಕ: 22ನೇ ಏಪ್ರಿಲ್ 2002**

**ಪಿರ್ಯಾಧಿದಾರರು :** ಪೊಲೀಸ್ ಸರ್ಕಲ್ ಇನ್ಸ್‌ಪೆಕ್ಟರ್ ಗೋಳಗುಮ್ಮಟ ಸರ್ಕಲ್ ವಿಜಾಪೂರ.
**ಆರೋಪಿತರು :** ಶ್ರೀ ಮೊದಾರಾಮ ರಾಜಪುರೋಹಿತ ಬಿನ್: ಜುನಾಗಿ ಕುಬುಸದ ಗಲ್ಲಿ ಹುಬ್ಬಳ್ಳಿ.

**ಪ್ರಸ್ತಾವನೆ:**

ಪಿರ್ಯಾಧಿದಾರರು ದಿನಾಂಕ 22.4.2002 ರಂದು ಒಂದು ಗೂಡ್ಸ್ ಮಿನಿ ಲಾರಿ ನೋಂದಣಿ ನಂಬರ್: ಕೆಎ:25:7632 ವಾಹನವನ್ನು ತನಿಖೆಗೆ ಒಳಪಡಿಸಿ, ರಾಜಾ ವಿಸ್ಕಿ 129.600 ಲೀಟರ್ (15 ಪೆಟ್ಟಿಗೆಗಳು) ಒರಿಜನಲ್ ಚಾಯ್ಸ್ ವಿಸ್ಕಿ 216.000 ಲೀ (25 ರಟ್ಟಿನ ಪೆಟ್ಟಿಗೆಗಳು) ರಾಜಾ ತ್ರಿಎಕ್ಸ್‌ರಮ್ 129.600 ಲೀ (15 ರಟ್ಟಿನ ಪೆಟ್ಟಿಗೆಗಳು) ಅನಧಿಕೃತವಾಗಿ ಸಾಗಾಣಿಕೆ ಮಾಡುತ್ತಿದ್ದರಿಂದ ಪಿರ್ಯಾಧಿದಾರರು ಪಂಚನಾಮಾ ಕ್ರಮವನ್ನು ಜರುಗಿಸಿ ರಸಾಯನಿಕ ತಜ್ಞರ ಪರೀಕ್ಷೆಗಾಗಿ ಶ್ಯಾಂಪಲ್ ಬಾಟ್ಲಿಗಳನ್ನು ತೆಗೆದು ಪ್ರಥಮ ಮಾಹಿತಿ ವರದಿ ನಂ: 67: 2002ನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಪ್ರಕರಣದಲ್ಲಿ ಆರ್.ಟಿ.ಓ. ಧಾರವಾಡ ರವರಿಗೆ ಬಿ-ಎಕ್ಸ್‌ಟ್ರ್ಯಾಕ್ಟ್ ಪ್ರತಿಯನ್ನು ಕಳುಹಿಸಲು ಕೋರಲಾಗಿ ಜಪ್ತುಮಾಡಿದ ವಾಹನವು ಕೆಎ:25:7632 ವಾಹನವು ಶ್ರೀ ಮೊದಾರಾಮ ರಾಜಪುರೋಹಿತ ಬಿನ್:ಜುನಾಗಿ, ಕುಬಸದ ಗಲ್ಲಿ ಹುಬ್ಬಳ್ಳಿ ಎಂಬುದಾಗಿ ತಿಳಿಸಿರುತ್ತಾರೆ. ಸದರಿ ಪ್ರಕರಣದಲ್ಲಿ ಜಪ್ತು ಮಾಡಿದ ಮಾದಕ ದ್ರವ್ಯಗಳ ಬಾಟ್ಲಿಗಳನ್ನು ರಸಾಯನಿಕ ತಜ್ಞರಿಗೆ ವರದಿಯನ್ನು ಕೇಳಲಾಗಿ ರಾಜಾ ವಿಸ್ಕಿಯಲ್ಲಿ 27.8.ಯು.ಪಿ., ಒರಿಜನಲ್ ಚಾಯ್ಸ್ ವಿಸ್ಕಿ 28.2 ಯು.ಪಿ. ರಾಜಾ ತ್ರಿಎಕ್ಸ್ ರಮ್ 26.7. ಯು.ಪಿ. ಮತ್ತು ಈ ಪ್ರಕರಣದಲ್ಲಿ ಜಪ್ತು ಮಾಡಿದ 25 ಗೊಬ್ಬರ ಚೀಲಗಳಲ್ಲಿ ಇದ್ದ ಪ್ರತಿಯೊಂದು ಚೀಲದಲ್ಲಿ 100 ಮಿಲಿಯ ಪ್ರಮಾಣದ 400 ಸ್ಯಾಸೆಗಳಿದ್ದು ಇವುಗಳ ಜೋರು 46.3 ಯು.ಪಿ. ಎಂಬುದಾಗಿ ಇರುತ್ತದೆ. ಎಂಬುದಾಗಿ ರಾಸಾಯನಿಕ ವಿಶ್ಲೇಷಣಾ ವರದಿ ನಂ: ಸಿಸಿಎಲ್: 3114: 2002 ದಿನಾಂಕ: 27.5.2002 ರ ವಿಶ್ಲೇಷಣಾ ವರದಿಯಲ್ಲಿ ದೃಢಪಟ್ಟಿರುತ್ತದೆ. ಈ ಕಾರಣಗಳಿಂದ ಜಪ್ತು ಮಾಡಿದ ವಾಹನದಲ್ಲಿ ರಹದಾರಿ ಪತ್ರ ವಗೈರೆ ಇಲ್ಲದೆಯೇ ಮಾದಕ ದ್ರವ್ಯದ ಅಂಶಗಳುಳ್ಳ ಬಾಟ್ಲಿಗಳನ್ನು ಮತ್ತು ಸರಾಯಿ ಸ್ಯಾಸ್‌ಗಳನ್ನು ಸಾಗಾಣಿಕೆ ಮಾಡಲು ಮತ್ತು ಹೊಂದಲು ನಿಯಮಗಳ ಅನುಸಾರ ಅಬಕಾರಿ ಇಲಾಖೆಯಿಂದ ರಹದಾರಿ ಪತ್ರ ಪಡೆದು ಸಾಗಾಣಿಕೆ ಮಾಡಬೇಕಾಗಿರುತ್ತದೆ. ಆದರೆ ಸದರಿ ಪ್ರಕರಣದಲ್ಲಿ ಜಪ್ತು ಮಾಡಿದ ವಾಹನದಲ್ಲಿ ಸಾಗಾಣಿಕೆ ಮಾಡಿದ ಮಾದಕ ದ್ರವ್ಯಗಳಿಗೆ ಅಬಕಾರಿ ಇಲಾಖೆಯಿಂದ ಯಾವುದೇ ರಹದಾರಿ ಪತ್ರ ವಗೈರೆ ನೀಡಿರುವುದಿಲ್ಲ. ಈ ಕಾರಣಗಳಿಂದ ಸಾರಿಗೆ ಅಧಿಕಾರಿಗಳು ಧಾರವಾಡ ರವರಿಗೆ ಇವರು ತಿಳಿಸಿದ ಟಪಾಲು ಅಡ್ರೆಸ್ಸಿಗೆ ನೋಂದಾಯಿಸಿದ ಮಾಲೀಕರಿಗೆ ಕಾರಣ ಕೇಳುವ ನೋಟಿಸನ್ನು ಈ ಕಛೇರಿಯಿಂದ ದಿನಾಂಕ: 22.5.2003 ರಂದು ಕಾರಣ ಕೇಳುವ ನೋಟಿಸನ್ನು ಹೊರಡಿಸಲಾಗಿತ್ತು. ಅಂಚೆ ಕಛೇರಿಯಿಂದ ಇಂತಹ ಟಪಾಲು ಅಡ್ರೆಸ್ಸಿನಲ್ಲಿ ಮಾಲೀಕರು ಇರುವುದಿಲ್ಲಾ ಅಥವಾ ಗೊತ್ತಿಲ್ಲವೆಂದು ತಿಳಿಸಿರುತ್ತಾರೆ. ಈ ಕಾರಣಗಳಿಂದ ಕಾರಣ ಕೇಳುವ ನೋಟಿಸನ್ನು ದ್ವಿಪ್ರತಿಗಳಲ್ಲಿ ಅಬಕಾರಿ ನಿರೀಕ್ಷಕರು ವಿಜಾಪೂರ ವಲಯ ಇವರಿಗೆ ಜಾರಿ ಮಾಡಿ, ಈ ಪ್ರಾಧಿಕಾರಕ್ಕೆ ಕಳುಹಿಸಲು ಸೂಚಿಸಲಾಗಿತ್ತು. ಈ ದಿನಾಂಕ: ಸಂಬಂಧಿಸಿದ ಅಬಕಾರಿ ಉಪ ನಿರೀಕ್ಷಕರನ್ನು ಇಲ್ಲಿ

ನ್ಯಾಯಾಲಯಕ್ಕೆ ಕರೆಯಿಸಿ ವಿಚಾರಿಸಲಾಗಿ ಈ ಪ್ರಕರಣದಲ್ಲಿ ಜಪ್ತು ಮಾಡಿದ ವಾಹನದ ಮಾಲೀಕರು 21.2.2003 ರಂದು ಮೃತರಾಗಿದ್ದಾರೆ ಎಂದು ತಿಳಿಸಿರುತ್ತಾರೆ. ಮತ್ತು ಈ ಪ್ರಾಧಿಕಾರಕ್ಕೆ ದಿನಾಂಕ: 9.5.2003 ರಂದು ಬಂದ ಬಿ-ಎಕ್ಸ್‌ಟ್ರ್ಯಾಕ್ಟ್ ಪ್ರತಿಯನ್ನು ಪರಿಶೀಲಿಸಲಾಗಿ ವಾಹನದ ಮಾಲೀಕರದ್ದಲ್ಲಿ ಯಾವುದೇ ಬದಲಾವಣೆಗಳು ಕಂಡು ಬಂದಿಲ್ಲಾ. ಈ ಕಾರಣಗಳಿಂದ ಈ ಪ್ರಕರಣದಲ್ಲಿ ಜಪ್ತು ಮಾಡಿದ ಮಾದಕ ದ್ರವ್ಯಗಳ ವಿಶ್ಲೇಷಣಾ ವರದಿಯನ್ನು ಅವಲೋಕಿಸಲಾಗಿ ಈ ಪ್ರಕರಣದಲ್ಲಿ ಜಪ್ತು ಮಾಡಿದ ಮಾದಕ ದ್ರವ್ಯದ ಬಾಟ್ಲಿಗಳಲ್ಲಿ ಸರ್ಕಾರ ನಿಗದಿಪಡಿಸಿದ ಪ್ರಮಾಣಕ್ಕಿಂತ ಮದ್ಯಸಾರದ ಅಂಶವು ಕಡಿಮೆ ಇದ್ದು ಜಪ್ತು ಮಾಡಿದ ಸರಾಯಿ ಸ್ಯಾಸೆಗಳಲ್ಲಿನ ಸರಾಯಿ ಕೂಡಾ ತುಂಬಾ ಕಡಿಮೆ ಮಾದಕ ದ್ರವ್ಯದ ಅಂಶ ಇರುವುದು ದೃಢಪಟ್ಟಿರುತ್ತದೆ. ಈ ಕಾರಣಗಳಿಂದ ಮಾನವ ಸೇವನೆಗೆ ಯೋಗ್ಯವಾಗಿದ್ದರೂ ಸಹ ಜಪ್ತು ಮಾಡಿದ ಈ ಮಾದಕ ದ್ರವ್ಯದ ಬಾಟ್ಲಿಗಳು ಮತ್ತು ಸರಾಯಿ ಸ್ಯಾಸೆಗಳು ಅನಧಿಕೃತವಾಗಿ ಕಮರಿಪೇಟೆಯಲ್ಲಿ ತಯಾರಿಸಿದ ಮದ್ಯದ ಬಾಟ್ಲಿಗಳೆಂದು ಮತ್ತು ಸರಾಯಿ ಸ್ಯಾಸೆಗಳು ಸಹ ಅಲ್ಲಿಂದಲೇ ಬಂದಿರುವುದೆಂದು ದೃಢಪಟ್ಟಿರುತ್ತದೆ. ಕಾರಣ ಬಾಟ್ಲಿಗಳ ಮೇಲಿರುವ ಸೆಕ್ಯೂರಿ ಶೀಲುಗಳು ಎಲ್ಲವು ನಕಲಿ ಶೀಲುಗಳಾಗಿರುತ್ತವೆ. ಆದ್ದರಿಂದಾ ಇಂತಹ ಮಾದಕ ದ್ರವ್ಯದ ಬಾಟ್ಲಿಗಳನ್ನು ಸನ್ನದುದಾರರಿಗೆ ಮಾರಾಟ ಮಾಡುವುದು ಸಮಂಜಸವಾಗಿ ಕಂಡು ಬರುವುದಿಲ್ಲ. ಮತ್ತು ಈ ಪ್ರಕರಣದಲ್ಲಿ ಆರೋಪಿತರು ತೀರಿ ಹೋಗಿರುವುದರಿಂದ ಈ ವಾಹನವನ್ನು ಸರ್ಕಾರಕ್ಕೆ ಗುನ್ಹೆ ದಾಖಲಾದ 22.4.2002 ರ ನಂತರ ಬೇರೆಯವರಿಗೆ ವರ್ಗಾವಣೆಯಾಗಿರುವುದಿಲ್ಲಾ ಹಾಗೂ ದಿನಾಂಕ: 9.5.2003 ರವರೆವಿಗೆ ಬೇರೆ ಇತರರಿಗೆ ಅಥವಾ ವಾರಸುದಾರರಿಗೆ ವರ್ಗಾವಣೆಯಾಗಿರುವುದಿಲ್ಲಾ. ಆದಕಾರಣ ಈ ವಾಹನವನ್ನು ಉಪಯೋಗಿಸಿಕೊಂಡು ಅನಧಿಕೃತವಾಗಿ ತಯಾರಿಸಿದ ಮಾದಕ ದ್ರವ್ಯದ ಬಾಟ್ಲಿಗಳನ್ನು ಮತ್ತು ಸರಾಯಿ ಸ್ಯಾಸೆಗಳನ್ನು ಹೊಂದಿರುವುದು ಮತ್ತು ಸಾಗಾಣಿಕೆ ಮಾಡಿರುವುದು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ ಕಲಂ 12, 14 13 ಕ್ಕೆ ವಿರುದ್ಧವಾಗಿದ್ದು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ) ಪ್ರಕಾರ ಮುಟ್ಟುಗೋಲು ಹಾಕಿಕೊಳ್ಳುವುದು ಉಚಿತವೆಂದು ಭಾವಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶದ ನಂ:ಇಎಕ್ಸ್‌ಇ:ಸಿಆರ್‌ಎಂ: 67: 2001-02/911 ದಿನಾಂಕ: 24ನೇ ಜುಲೈ 2003**

ಕೆ. ಆರ್. ಗೋವಿಂದಶೆಟ್ಟಿ, ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಉಪ ಆಯುಕ್ತರು ವಿಜಾಪೂರ ಜಿಲ್ಲೆ ವಿಜಾಪೂರ ಆದ ನಾನು, ನನಗೆ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಪೋಲಿಸ್ ಸರ್ಕಲ್ ಇನ್ಸ್‌ಪೆಕ್ಟರ್, ಗೋಲಗುಮ್ಮಟ ಸರ್ಕಲ್ ವಿಜಾಪೂರ ಶಹರ, ಇವರ ಗುನ್ಹೆ ನಂ:67:2002 ರಲ್ಲಿ ಜಪ್ತು ಮಾಡಿದ ರಾಜಾ ವಿಸ್ಕಿ 129.600 ಲೀ (15 ಪೆಟ್ಟಿಗೆಗಳು) ಒರಿಜನಲ್ ಚಾಯ್ಸ್ ವಿಸ್ಕಿ 216.000 ಲೀ (25 ರಟ್ಟಿನ ಪೆಟ್ಟಿಗೆಗಳು) ರಾಜಾ ತ್ರಿಎಕ್ಸ್ ರಮ್ 129.600 ಲೀ (15 ರಟ್ಟಿನ ಪೆಟ್ಟಿಗೆಗಳು) ಮತ್ತು 25 ಗೊಬ್ಬರ ಚೀಲಗಳಲ್ಲಿ ತಲಾ ಚೀಲದಲ್ಲಿ 400 ಪಾಕೀಟನಂತೆ ಒಟ್ಟು 1000 ಲೀಟರ್ ಸರಾಯಿ. ಮತ್ತು ಸಾಗಾಣಿಕೆ ಮಾಡಲು ಉಪಯೋಗಿಸಿದ ವಾಹನ ನಂ: ಕೆಎ:25:7632 ವಾಹನವನ್ನು ಕರ್ನಾಟಕ ರಾಜ್ಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶವನ್ನು ನೀಡಿದ್ದೇನೆ.

ಈ ಪ್ರಕರಣದಲ್ಲಿ ಮುಟ್ಟುಗೋಲು ಹಾಕಿಕೊಂಡ ಮಾದಕ ದ್ರವ್ಯದ ಬಾಟ್ಲಿಗಳನ್ನು ಅಬಕಾರಿ ಉಪ ಅಧೀಕ್ಷಕರು ವಿಜಾಪೂರ ಉಪವಿಭಾಗ ಇವರ ಸಮಕ್ಷಮದಲ್ಲಿ ನಾಶಪಡಿಸಿ ಖಾಲಿ ಬಾಟ್ಲಿಗಳನ್ನು ಹರಾಜು ಮಾಡಿ ರಾಜ್ಯ ಸರ್ಕಾರಕ್ಕೆ ಕಟ್ಟಿಸಲು ಅಬಕಾರಿ ನಿರೀಕ್ಷಕರು ವಿಜಾಪೂರ ವಲಯ ಇವರಿಗೆ ಸೂಚಿಸಲಾಗಿದೆ. ಮತ್ತು ಈ ಪ್ರಕರಣದಲ್ಲಿ ಜಪ್ತಾದ ಸರಾಯಿ ಸ್ಯಾಸೆಗಳನ್ನು ಅಬಕಾರಿ ನಿರೀಕ್ಷಕರು ವಿಜಾಪುರ ವಲಯ ಇವರು ಖುದ್ದಾಗಿ ನಿಂತು ನಾಶಪಡಿಸಲು ಆದೇಶವನ್ನು ನೀಡಲಾಗಿದೆ.

ಈ ಆದೇಶವನ್ನು ಹೊರಡಿಸಿದ 30 ದಿನಗಳ ನಂತರ ಅಥವಾ ಅಪೀಲು ಅವಧಿ ಮುಗಿದ ನಂತರ ಮುಟ್ಟುಗೋಲು ಹಾಕಿಕೊಂಡ ವಾಹನವನ್ನು ಅಂದರೆ ಕೆಎ:25:7632 ಮಿನಿ ಗೂಡ್ಸ್ ಲಾರಿ ವಾಹನವನ್ನು ಬಹಿರಂಗ ಹರಾಜು ಮೂಲಕ ವಿಲೇ ಮಾಡಲು ಅಬಕಾರಿ ನಿರೀಕ್ಷಕರು ವಿಜಾಪೂರ ವಲಯ ಇವರಿಗೆ ಸೂಚಿಸಲಾಗಿದೆ.

ಈ ಆದೇಶವನ್ನು 24.7.2003 ರಂದು ಬೆರಳಚ್ಚು ಮಾಡಿಸಿ, ನನ್ನ ಸಹಿ ಮತ್ತು ಮೊಹರು ಹಾಕಿ ನೀಡಲಾಗಿದೆ.

ಅಧಿಕೃತ ಅಧಿಕಾರಿ ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ವಿಜಾಪೂರ,
ಜಿಲ್ಲೆ, ವಿಜಾಪುರ.

ಪಿ.ಆರ್. 1101

**PROCEEDINGS OF THE REGISTRAR OF CO-OPERATIVE SOCIETIES, SHIMOGA SUB DIVISION, SHIMOGA**

**Sub :** Confirmation of Sale of immovable property pertaining to the Judgement debtor Sri. R. Udaya S/o Rangappa and Sri. Rangappa S/o Ugrappa, Gajanur Village, Shimoga Taluk under execution No. 216/02-03, 217/02-03 and O.S. No. 454/01-02 and 455/01-02 in the file of Assistant Registrar of Co-Operative Societies, Shimoga issue of orders. Reg.

**Ref :** Report of Sale Officer/Recovery Officer PCA and RD Bank, Shimoga Vide his letter dated: 1.09.2003.

**Preamble:**

The Secretary Primary Co-Operative Agriculture and Rural Development Bank Ltd., Shimoga has filed a dispute under section 70 of Karnataka Co-Operative Societies Act 1959 against the Member Sri. R. Udaya S/o Rangappa and Rangappa S/o Ugrappa, Gajanur, Shimoga, Taluk, Shimoga Dist. Before the Deputy Registrar of Co-Operative Societies, Shimoga vide dispute No. 454/2001-02, 455/2001-02 and obtained an award against the said member for recovery of the debt due by the above said member for recovery of the debt to the above said bank of dated 25.02.2002 The execution proceedings under

execution on petition No. 216/2002-03 and 217/2002-03 on the file of this office has been taken against the Judgement debtor. As per the K.C.S. Act and Rules, the Sale Officer Primary Co-Operative Agriculture and Rural Development Bank Ltd., Shimoga has brought the mortgaged property of the Judgement debtor Sri. R. Udaya S/o Rangappa and Rangappa S/o Ugrappa, Gajanur, Shimoga Taluk, Shimoga Dist, into Sale for recovery of the decretal dues of the bank in order to realise the dues the sale in public auction was conducted on dated: 01.07.2003. After observing proceedural formalities ennumerated under Rule 38 of K.C.S. Rule 1960 in public auction the said scheduled mortagage property was sold to the highest bidder Smt. Savitramma W/o B.H.Nanjappa, Durgidudi, Shimoga Taluk and Dist. to the extent of Rs. 2,80,000/- (Rupees Two Lakh Eighty thousand only) There were no objection from anybody either before the sale or after the sale of 30 days From the above, the sale conducted on 1.07.2003 in orders and to made it as obsulate and hence the following order.

**Order**

**No. ARIS: 24: ABN:SXN: 03-04: 884: Dated: 9th September 2003**

In exercise of the powers conferred under Rule 38 (6) (a) of Karnataka Co-Operative Societies Act 1959 and Rule 1960 read with Government Notification No. CMW:69:CLM:2001 dated: 21.11.2001 The Sale of immovable property detailed in the schedule here into under the execution proceedings of execution petition was sold on public auction conducted by the Sale Officer/Assistant Recovery Officer, Primary Co-Operative Agriculture and Rural Development Bank Ltd., Shimoga on 01.07.2003 is hereby confirmed in favour of the auction purchaser Smt. Savitramma W/o B.H. Nanjappa, Durgigudi, Shimoga Taluk and Dist. for an amount of Rs. 2,80,000/-(Rupees Two Lakh Eighty thousand only).

The Sale Certificate as required under Sub Rule (7) of Rule 38 of K.C.S. Rules 1960 is issued separately to the purchaser.

**SCHEDULE OF PROPERTY**

| Name of the Khatedar | Village/Taluk | Property | Sy.No. |
|---|---|---|---|
| Rangappa S/o Ugrappa, Gajanur, Shimoga Taluk | Gajanur Village Shimoga Taluk | Rain Fed Land extent 2.06 acres | 116 |

Given under my hand an and seal on this the day 9th September 2003

Assistant Registrar of Co-Operative Societies,
Shimoga Sub Division,
Shimoga.

PR-1102

**PROCEEDINGS OF THE REGISTRAR OF CO-OPERATIVE SOCIETIES, IN KARNATAKA BANGALORE**

**No:LDB/3/LFD/2003-04 Dated: 11th September 2003**

**Sub :** Floatation of Special Development Debentures by the KSCA&RD Bank Under Various schemes for Rs.8,32,44,400/- issue of orders-reg.

**Ref :**
1. Proposal No: FS/DEB/381/2003-04 Dated: 9.9.2003 of the KSCA&RD Bank Ltd., Bangalore addressed to NABARD, Bangalore, forwarding the proposal for Floatation of Special Development Debentures for Rs. 8,32,44,400/- for their approval.
2. Letter No. NB/(BL)/ICD/5049/LDB-12/2003-04 Dated: 10.9.2003 of the NABARD, Bangalore addressed to the Managing Director, KSCA&RD Bank, under copy to the Registrar of Co-operative Societies in Karnataka, Bangalore conveying their approval to the proposal cited above at 1, for Rs.8,32,44,400
3. Government O.M. No. FD. 95: RLG:68 Dated: 11.11.1971.
4. Letter No. CMW: 134: CLS 2002, Bangalore Dated: 1.8.2003 Sanctioning the Government Guarantee for Rs. 166.00 crores on behalf of the KSCA&RD Bank for the year 2003-2004.
5. Proposal No. FS/DEB/383/2003-04 dated:10.9.2003 of the KSCA & RD Bank addressed to this office requesting for issue of orders for the floatation of the debentures approved by the NABARD as cited in Ref. 2 above.

**Preamble:**

The Karnataka State Co-operative Agriculture and Rural Development Bank Ltd., in its letter cited (1) has forwarded a proposal to the National Bank for Agriculture and Rural Development, Bangalore for floatation of Special Development Debentures under Various schemes for Rs.8,32,44,400/- and has requested them for their approval. On considering the proposal of the KARNATAKA STATE CO-OPERATIVE AGRICULTURE AND RURAL DEVELOPMENT BANK cited above at (1) the National Bank for Agriculture and Rural Development, Bangalore in their letter above at (2) has conveyed their approval for the floatation and agreed to subscribe to Special Development Debentures floated by the Bank to the extent of Rs.7,72,16,800/- The contribution from State Government and Central Government is to the extent of Rs. 30,13,800/- each. Government in its O.M. cited above at (3) has prescibed the terms and

conditions to be imposed by Government while guaranteeing the debentures to be floated by any institution. In the Government order cited above at (4), Government has issued the Government guarantee on behalf of the Karnataka State Co-operative Agriculture and Rural Development Bank for the year 2003-2004 and has authorised the Registrar of Co-operative Societies to issue order etc., upto Rs. 10.00 crore on each occasion, and to make the contribution to the debentures according to the pattern approved by the NABARD. All the relevant terms and conditions applicable to the Karnataka State Co-operative Agriculture and Rural Development Bank as per references cited above at (3) and (4) are to be followed. The Karnataka State Co-operative Agriculture and Rural Development Bank, in its letter cited at (5) has requested this Office for issue of orders for floatation of debentures as approved by the National Bank for Agriculture and Rural Development vide reference cited above at (2).

**Order**

1. Registrar of Co-operative Societies in Karnataka, Bangalore, hereby permits the Karnataka State Co-operative Agriculture and Rural Development Bank Ltd., Bangalore, to float Special Development Debentures to the extent of Rs. 8,32,44,400/- (Rupees Eight Crores Thirtytwo lakhs Fortyfour thousand Four Hundred only) limiting the amount of debentures to the value of accumulated un-encumbered mortgages secured for implementing the National Bank for Agriculture and Rural Development Scheme, as per the details indicated hereunder, subject to the terms and conditions stipulated in the ANNEXURE-1 to this order.
2. Sanction is hereby accorded to contribute a sum of Rs. 30,13,800/- (Rupees Thirty lakhs Thirteen thousand Eight hundred only/-) being the State Government share of contribution to the various Special Development Debentures to be floated by the Karnataka State Co-operative Agriculture and Rural Development Bank Ltd., Bangalore, as approved by the National Bank for Agriculture and Rural Development vide their letter above at (2).
3. The currency for floating these debentures would be up to 31.10.2003.
4. Any of the Officers of the Karnataka State Co-operative Agriculture and Rural Development Bank who are grouped hereunder are authorised to draw the amount on a payees receipt duly countersigned by the Additional Registrar of Co-operative Societies (ADM & DEV), Head Office, Bangalore.

a) General Manager and Manager, Finance

OR

b) General Manager, Finance and Deputy General Manager,

OR

c) General Manager, Finance and Manager.

The expenditure of Rs. 30,13,800/- (Rupees Thirty lakhs Thirteen thousand Eight hundred only) in this behalf towards Government of Karnataka share of contribution may be met under the budget Head "6416-Loans for Agricultural Financial Institutions-190 Loans to public sector and other undertakings-1 K.S. Co-operative Agriculture and R D. Bank-01 Loans for purchase of debentures." (6416-00-190-1-01)

Registrar of Co-operative Societies,
in Karnataka, Bangalore.

PR-1103

**ಸಿವಿಲ್ ಜಡ್ಜ್(ಕಿ.ಶ್ರೇ) ಮತ್ತು ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯ,**

**ಹೆಗ್ಗಡದೇವನಕೋಟೆ, ಮೈಸೂರು ಜಿಲ್ಲೆ**

**ವಿಷಯ :** ಈ ನ್ಯಾಯಾಲಯದ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ: 294:99 ಅಪರಾಧ ಸಂಖ್ಯೆ:50:99, ಸರಗೂರು ಪೊಲೀಸ್ ಠಾಣೆ. ಮಾಲು ಪಟ್ಟಿ ಸಂಖ್ಯೆ: 51:99 ಇದರ ಬಾಬ್ತು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವ ಮುದ್ದೆ ಮಾಲನ್ನು ಹರಾಜು ಮಾಡುವ ಬಗ್ಗೆ.

**ಉಲ್ಲೇಖ :** ಕ್ರಿಮಿನಲ್ ಮೊಕದ್ದಮೆ ಸಂಖ್ಯೆ:294:99 ರಲ್ಲಿ ಈ ನ್ಯಾಯಾಲಯದ ದಿನಾಂಕ: 19.11.99ರ ಆದೇಶದನ್ವಯ.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಈ ನ್ಯಾಯಾಲಯದಲ್ಲಿ ಮೇಲ್ಕಂಡ ಕ್ರಿಮಿನಲ್ ಮೊಕದ್ದಮೆಗೆ ಸಂಬಂಧಿಸಿದಂತೆ ಈ ಕೆಳಗೆ ನಮೂದಿಸಿರುವ ಮುದ್ದೆ ಮಾಲುಗಳನ್ನು ದಿನಾಂಕ: 19.11.1999ರ ಆದೇಶದನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದ್ದು ಈವರೆವಿಗೂ ಸದ್ರಿ ಮುದ್ದೆ ಮಾಲುಗಳಿಗೆ ಸಂಬಂಧಿಸಿದಂತೆ ಯಾರೂ ವಾರಸುದಾರರು ಪಡೆಯಲು ಮುಂದೆ ಬರಲಿಲ್ಲವಾದ್ದರಿಂದ ಹಾಗೂ ಮೇಲ್ಕಂಡ ಈ ನ್ಯಾಯಾಲಯದ ಆದೇಶವನ್ನು ಪುನರ್ ಪರಿಷ್ಕರಣೆ ಅರ್ಜಿ ಹಾಗೂ ಮೇಲ್ಮನವಿಗಳ ಮೂಲಕ ಈವರೆವಿಗೂ ಯಾರು ತಡೆಯಾಜ್ಞೆ ತಂದಿಲ್ಲವಾದ್ದರಿಂದ ಅಥವಾ ಯಾವುದೇ ಮೇಲ್ಮನವಿ ಇತ್ಯರ್ಥವಾಗದೆ ಬಾಕಿ ಉಳಿದಿಲ್ಲವಾದ್ದರಿಂದ ಈ ನ್ಯಾಯಾಲಯದ ಆದೇಶವೇ ಈವರೆವಿಗೆ ಅಂತಿಮವಾಗಿರುವುದರಿಂದ ಮೇಲ್ಕಂಡಂತೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವ ಈ ಕೆಳಗೆ ನಮೂದಿಸಿರುವ ಕ್ರಿಮಿನಲ್ ಮುದ್ದೆ ಮಾಲನ್ನು ನ್ಯಾಯಾಲಯದಲ್ಲಿ ಬಹಿರಂಗ ಹರಾಜು ಮಾಡಲಾಗುವುದು

**ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಹರಾಜು ಮಾಡಲಾಗುವ ಮುದ್ದೆ ಮಾಲಿನ ವಿವರ**

| ಕ್ರ.ಸಂ. | ವಾಹನದ ಸಂಖ್ಯೆ | ಮುದ್ದೆ ಮಾಲಿನ ಮೊಕದ್ದಮೆ ಮತ್ತು ಪಿ.ಆರ್. ಸಂಖ್ಯೆ ಹಾಗೂ ಪಿಎಫ್ ಸಂಖ್ಯೆ ಪೊಲೀಸ್ ಠಾಣೆಯ ಹೆಸರು | ಆದೇಶದ ದಿನಾಂಕ: |
|---|---|---|---|
| 1. | ಕೆಎ-21:ಎಂ-1010 ಮಾಸಲು ಬಿಳಿ ಬಣ್ಣದ ಜೀಪು. | ಪಿ.ಆರ್.ನಂ:52:02<br>ಸಿ.ಸಿ.ನಂ:294:99<br>ಪಿ.ಎಫ್.ನಂ:51:99<br>ಅಪರಾಧ ಸಂ:50:99<br>ಸರಗೂರು ಪೊಲೀಸ್ ಠಾಣೆ<br>ಹೆಚ್.ಡಿ.ಕೋಟೆ ತಾಲ್ಲೂಕು. | ದಿನಾಂಕ:19.11.99 |

ಈ ಆದೇಶವನ್ನು ದಿನಾಂಕ: 10.9.2003 ರಂದು ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತದೆ.

**ಬಿ. ವೆಂಕಟೇಶ್**

ಪಿ.ಆರ್. 1104 ಸಿವಿಲ್ ಜಡ್ಜ್ (ಕಿ.ಶ್ರೇ) ಮತ್ತು ಜೆಎಂಎಫ್‌ಸಿ ಹೆಗ್ಗಡದೇವನಕೋಟೆ.

## ಯೋಜನಾ ಸಮನ್ವಯಾಧಿಕಾರಿಗಳ ಕಛೇರಿ, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ, ಚಿಕ್ಕಮಗಳೂರು,

## ಪ್ರಕಟಣೆ

**ಸಂಖ್ಯೆ: ಗಿಉಯೋಚಿ:ಗಿಕ5:ಸಿಆರ್-14: 2003-04 ಚಿಕ್ಕಮಗಳೂರು ದಿನಾಂಕ: 5ನೇ ಸೆಪ್ಟೆಂಬರ್ 2003**

**ವಿಷಯ :** ಪರಿಶಿಷ್ಟ ಪಂಗಡದ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ತರಬೇತಿ ನೀಡುವ ಕುರಿತು.

ಚಿಕ್ಕಮಗಳೂರು ಜಿಲ್ಲೆಯಲ್ಲಿರುವ ಪರಿಶಿಷ್ಟ ಪಂಗಡಕ್ಕೆ ಸೇರಿದ ಕಾನೂನು ಪದವೀಧರರಿಗೆ 2003-04ನೇ ಸಾಲಿಗೆ ಆಡಳಿತ ನ್ಯಾಯಾಧೀಕರಣದಲ್ಲಿ 4 ವರ್ಷದ ತರಬೇತಿಯನ್ನು ನೀಡುವ ಸಲುವಾಗಿ ಅರ್ಹ ವಿದ್ಯಾರ್ಥಿಗಳಿಂದ ನಿಗದಿತ ನಮೂನೆಯಲ್ಲಿ ಅರ್ಜಿಯನ್ನು ಕರೆಯಲಾಗಿದೆ. ಈ ತರಬೇತಿಯನ್ನು ಪಡೆಯಲು ಇಚ್ಚಿಸುವ ಅಭ್ಯರ್ಥಿಗಳು ಈ ಕೆಳಕಂಡ ಅರ್ಹತೆಯನ್ನು ಹೊಂದಿರಬೇಕು.

1. ಅಭ್ಯರ್ಥಿಗಳು ಪರಿಶಿಷ್ಟ ಪಂಗಡದವರಾಗಿರಬೇಕು.
2. ಈ ಅಭ್ಯರ್ಥಿಗಳು ಆಡಳಿತದಲ್ಲಿ ನ್ಯಾಯಾಧೀಕರಣ ವೃತ್ತಿಯನ್ನು ಕೈಗೊಳ್ಳಲು ಅರ್ಹತೆ ಹೊಂದುವ ಕಾನೂನು ಪದವಿಯನ್ನು ಪಡೆದಿರಬೇಕು.
3. ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯ ಮೂಲಕ ಅಭ್ಯರ್ಥಿಯನ್ನು ಸಂದರ್ಶನಕ್ಕೆ ಕರೆದು ಆಯ್ಕೆ ಮಾಡಲಾಗುವುದು. ಹಾಗೂ ಅವರನ್ನು 4 ವರ್ಷದ ತರಬೇತಿಗೆ ಸರ್ಕಾರಿ ಅಭಿಯೋಜಕರ ಬಳಿ ತರಬೇತಿ ನಿಯೋಜಿಸಲಾಗುವುದು.
4. ಈ ತರಬೇತಿಯ ಅವಧಿಯಲ್ಲಿ ಹಾಜರಾತಿ ಹಾಗೂ ದಿನಚರಿಗಳನ್ನು ಪಡೆದು ಅದನ್ನು ಪರಿಶೀಲಿಸಿ ಪ್ರತಿ ತಿಂಗಳು ರೂ.1,000-00 (ಒಂದು ಸಾವಿರ ರೂ) ತರಬೇತಿ ಭತ್ಯೆಯನ್ನು ಹಾಜರಾತಿ ಅನುಸರಿಸಿ ಪಾವತಿಸಲಾಗುವುದು.
5. ಅಭ್ಯರ್ಥಿಗಳು ಸರ್ಕಾರದಿಂದ ರೂಪಿಸಲಾದ ನಿಯಮಗಳಿಗೆ ಬದ್ದನಾಗಿರುವ ಬಗ್ಗೆ ತರಬೇತಿಯನ್ನು ಮಧ್ಯದಲ್ಲಿ ಬಿಡದಿರುವ ಬಗ್ಗೆ ಒಂದು ಮುಚ್ಚಳಿಕೆ ಪತ್ರವನ್ನು 15.00 ರೂ. ಛಾಪಾ ಕಾಗದದ ಮೇಲೆ ಬರೆದುಕೊಡಬೇಕು.
6. ತರಬೇತಿಗೆ ಅರ್ಜಿಯನ್ನು ಸಲ್ಲಿಸಲು ಇಚ್ಚಿಸುವ ಅಭ್ಯರ್ಥಿಗಳನ್ನು ದ್ವಿಪ್ರತಿಯಲ್ಲಿ ಕೊನೆಯ ದಿನಾಂಕದೊಳಗೆ ಭರ್ತಿಮಾಡಿ ಎಸ್.ಎಸ್.ಎಲ್.ಸಿ. ಮೇಲ್ಪಟ್ಟು ಎಲ್ಲಾ ಪರೀಕ್ಷೆಗಳ ಅಂಕಪಟ್ಟಿ ಜಾತಿ ದೃಢೀಕರಣ ಪತ್ರಗಳನ್ನು ಸಕ್ಷಮ ಅಧಿಕಾರಿಗಳಿಂದ ಪಡೆದು ನ್ಯಾಯವಾದಿ ವೃತ್ತಿಯನ್ನು ಪ್ರಾರಂಭಿಸಲು ಬೇಕಾಗುವ ಬಾರ್ ಕೌನ್ಸಿಲ್‌ನ ನೊಂದಾಣಿ ಪ್ರಮಾಣ ಪತ್ರದ ಪ್ರತಿಯೊಂದಿಗೆ ಅರ್ಜಿ ಸಲ್ಲಿಸಬೇಕು.
7. ಅರ್ಜಿಸಲ್ಲಿಸುವ ದಿನಾಂಕಕ್ಕೆ 2 ವರ್ಷಗಳ ಒಳಗೆ ಕಾನೂನು ಪದವಿಯನ್ನು ಪಡೆದ ಪ.ಪಂಗಡದ ವಿದ್ಯಾರ್ಥಿಗಳು ಮಾತ್ರ ಅರ್ಜಿಸಲ್ಲಿಸಲು ಅರ್ಹರಾಗಿರುತ್ತಾರೆ.
8. ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕ ಅಭ್ಯರ್ಥಿಗಳ ವಯಸ್ಸು 35 ವರ್ಷವನ್ನು ಮೀರಿರಬಾರದು.
9. ಆಯ್ಕೆಯಾದ ಅಭ್ಯರ್ಥಿಯು ಯಾವುದೇ ನೌಕರಿಯಲ್ಲಿರಬಾರದು. ಅಥವಾ ತರಬೇತಿ ಸರ್ಕಾರಿ ಖಾಸಗಿ ಸೇವೆಗಳಲ್ಲಿ ಸೇರಿರಬಾರದು.
10. ಪೂರ್ತಿಯಾಗಿ ಭರ್ತಿ ಮಾಡಿದ ಅರ್ಜಿಗಳನ್ನು ಕಾರ್ಯದರ್ಶಿ, ಜಿಲ್ಲಾ ಮಟ್ಟದ ಆಯ್ಕೆ ಸಮಿತಿ, ಯೋಜನಾ ಸಮನ್ವಯ ಅಧಿಕಾರಿಗಳು, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ, ಚಿಕ್ಕಮಂಗಳೂರು ಇವರಿಗೆ ದಿನಾಂಕ: 30.9.2003 ಸಂಜೆ 5.00 ಗಂಟೆಯೊಳಗಾಗಿ ತಲುಪಿಸಬೇಕು.
11. ನಿಗದಿತ ನಮೂನೆಯ ಅರ್ಜಿ ಫಾರಂಗಳನ್ನು ಈ ಕಛೇರಿಯ ವೇಳೆಯಲ್ಲಿ ಉಚಿತವಾಗಿ ಪಡೆದುಕೊಳ್ಳಬಹುದು.

ಯೋಜನಾ ಸಮನ್ವಯಾಧಿಕಾರಿ

ಪಿ.ಆರ್. 1105 ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ, ಚಿಕ್ಕಮಗಳೂರು.

## ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರವರ ಕಛೇರಿ, ಯಾಂತ್ರಿಕ ಉಪವಿಭಾಗ, (ಜಿಪಂಇಂ) ಬೆಳಗಾಂವ.

### ಅಧಿಸೂಚನೆ

**ಸಂಖ್ಯೆ: ಯಾಂಉವಿಬೆ:ಜಿಪಂಇಂ:ಸಿ-1: ಕಛೇರಿ ಸ್ಥಳಾಂತರ:2003-04/465 ದಿನಾಂಕ: 11ನೇ ಸೆಪ್ಟೆಂಬರ್ 2003**

**ವಿಷಯ :** ಯಾಂತ್ರಿಕ ಉಪ ವಿಭಾಗ, (ಜಿಪಂಇಂ) ಬೆಳಗಾಂವ ಈ ಕಚೇರಿಯನ್ನು ಹಾಲಿ ಇರುವ ಪ್ಲಾಟ್ ನಂ.337 ರಾಮತೀರ್ಥನಗರ, ಬೆಳಗಾಂವದಿಂದ ಡಾಕ್ ಬಂಗ್ಲಾ ಶಹಾಪುರ ಬೆಳಗಾಂವ ಕಟ್ಟಡಕ್ಕೆ ಸ್ಥಳಾಂತರಿಸಿದ ಕುರಿತು.

**ಉಲ್ಲೇಖ :** 1. ಕಾನಿಇಂ ಜಿಪಂಇಂ ವಿಭಾಗ, ಬೆಳಗಾಂವ ಇವರ ಪಸಂ:ಜಿಪಂಇಂ: ಬೆವಿ: ಸಿ-5: 2003-04:3352 ದಿನಾಂಕ: 18.8.03.

2. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಪಂ ಬೆಳಗಾಂವ ಇವರ ಪಸಂ:ಜಿಪ: ಗ್ರಾಪ: ಆಡಳಿತ: ವಿವ-62 2002-03 ದಿನಾಂಕ: 3.9.03.

ಮೇಲಿನ ಉಲ್ಲೇಖ (1)ರಲ್ಲಿ ನಿರ್ದೇಶಿಸಿರುವಂತೆ ಈ ಕಚೇರಿಯನ್ನು ಹಾಲಿ ಇರುವ ಪ್ಲಾಟ್ ನಂ.337 ರಾಮತೀರ್ಥ ನಗರ ಬೆಳಗಾಂದಿಂದ ಡಾಕ್ ಬಂಗ್ಲಾ ಶಹಾಪುರ, ಬೆಳಗಾಂವ ಕಟ್ಟಡಕ್ಕೆ ದಿನಾಂಕ: 1.9.03 ರಂದು ಸ್ಥಳಾಂತರಿಸಲಾಗಿದೆ. ಈಗಿದ್ದ ಕಛೇರಿ ದೂರವಾಣಿ ಸಂಖ್ಯೆ:457198 ದಿಂದ ಹೊಸದಾಗಿ ಕಚೇರಿಯ ದೂರವಾಣಿ ಸಂಖ್ಯೆ:2423684 ಬದಲಾಗಿದೆ ಎಂದು ಸಂಬಂಧಪಟ್ಟ ಎಲ್ಲರ ತಿಳುವಳಿಕೆಗಾಗಿ ಅಧಿಸೂಚಿಸಲಾಗಿದೆ.

ಆದ್ದರಿಂದ ಕಚೇರಿಗೆ ವಿಳಾಸಿಸಿ ಬರೆಯಬೇಕಾದ ಎಲ್ಲಾ ಪತ್ರಗಳನ್ನು ಈ ಕೆಳಗೆ ನಮೂದಿಸಿದ ವಿಳಾಸಕ್ಕೆ ಕಳುಹಿಸಲು ಕೋರಿದೆ.

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು,
ಯಾಂತ್ರಿಕ ಉಪ ವಿಭಾಗ, (ಜಿಪಂಇಂ)
ಡಾಕ್ ಬಂಗ್ಲಾ ಶಹಾಪೂರು,
ಬೆಳಗಾಂವ-590 003. ದೂರವಾಣಿ ಸಂಖ್ಯೆ:2423684

**ಆರ್. ಕೆ. ತಿಗಡಿ**

ಪಿ.ಆರ್. 1106

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು,
ಯಾಂತ್ರಿಕ ಉಪ ವಿಭಾಗ, (ಜಿಪಂಇಂ) ಬೆಳಗಾಂ.

## ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ, ಮಧುಗಿರಿ ಇವರ, ನ್ಯಾಯಾಲಯದಲ್ಲಿನ ನಡವಳಿಕೆಗಳು

**ವಿಷಯ :** ಶಿರಾ ತಾಲ್ಲೂಕು ವ್ಯವಸಾಯ ಸೇವಾ ಸಹಕಾರ ಸಂಘ(ನಿ) ಹೊನ್ನಗೊಂಡನಹಳ್ಳಿ ಹೆಚ್.ಓ.ಮದಲೂರು ಶಿರಾ ತಾ: ಇದರಲ್ಲಿ ಹಣ ದುರುಪಯೋಗ ಬಗ್ಗೆ ಗೋವಿಂದಪ್ಪ ಇವರ ಕಾನೂನು ವಾರಸುದಾರರಾದ ಅವರ ಪತ್ನಿ ಶ್ರೀಮತಿ ರಂಗಮ್ಮನವರ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಸಹಕಾರಿ ಕಾಯಿದೆ ಕಲಂ 103ರ ಅಡಿಯಲ್ಲಿ ತೀರ್ಪು ಪೂರ್ವ ಜಪ್ತಿ ಆದೇಶ ಮಾಡುವ ಬಗ್ಗೆ.

**ಉಲ್ಲೇಖ :** 1. ಕಾರ್ಯದರ್ಶಿ, ವ್ಯವಸಾಯ ಸೇವಾ ಸಹಕಾರ ಸಂಘ (ನಿ), ಹೊನ್ನಗೊಂಡನಹಳ್ಳಿ ಶಿರಾ ತಾಲ್ಲೂಕು ಇವರ ಪತ್ರದ ದಿನಾಂಕ: 7.8.03 ಮತ್ತು 15.9.03.

2. ಈ ನ್ಯಾಯಾಲಯದಲ್ಲಿ ವಿಚಾರಣೆ ನಡೆಯುತ್ತಿರುವ ಅಧಿಭಾರ ಅರ್ಜಿಸಂಖ್ಯೆ:8:2003-04.

**ಪ್ರಸ್ತಾವನೆ:**

ಶ್ರೀ ಗೋವಿಂದಪ್ಪ ಮಾಜಿ ಕಾರ್ಯದರ್ಶಿ, ವ್ಯವಸಾಯ ಸೇವಾ ಸಹಕಾರ ಸಂಘ (ನಿ) ಹೊನ್ನಗೊಂಡನಹಳ್ಳಿ ಹೆಚ್.ಓ. ಮದಲೂರು ಶಿರಾ ತಾಲ್ಲೂಕು ಇವರು ಸದರಿ ಸಂಘದಲ್ಲಿ ರೂ 391182-20 ಹಣ ದುರುಪಯೋಗ ಪಡಿಸಿರುವುದಾಗಿ 1995-96 ರಿಂದ 2001-02ನೇ ಸಾಲುಗಳ ಲೆಕ್ಕಪರಿಶೋಧನಾ ವರದಿಗಳಲ್ಲಿ ದೃಢಪಟ್ಟಿದ್ದು ಈ ಹಣದ ವಸೂಲಾತಿಗೆ ಸಂಘದ ಹಾಲಿ ಕಾರ್ಯದರ್ಶಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69 ರಡಿಯಲ್ಲಿ ದಾವೆ ಹೂಡಿರುತ್ತಾರೆ. ಈ ದಾವೆಯಲ್ಲಿ ದಿನಾಂಕ: 21.07.03 ರಂದು ಕಡತದಲ್ಲಿ ದಾಖಲಿಸಿಕೊಂಡು ದಿನಾಂಕ: 16.8.03 ರಂದು ವಿಚಾರಣೆಗೆ ಪ್ರಾರಂಭಿಸಿದ್ದು ಈ ನ್ಯಾಯಾಲಯದಲ್ಲಿ ವಿಚಾರಣೆ ಪ್ರಕ್ರಿಯೆ ನಡೆಯುತ್ತಿರುತ್ತದೆ. ಅರ್ಜಿದಾರ ಸಂಘವು ಉಲ್ಲೇಖಿತ (1)ರ ಪತ್ರದಲ್ಲಿ ಶ್ರೀ ಗೋವಿಂದಪ್ಪ ಇವರು ದುರುಪಯೋಗಪಡಿಸಿದ ಹಣ ರೂ. 391182-20ಗಳ ವಸೂಲಿ ಕುರಿತು ಹಣದ ಭದ್ರತೆಗಾಗಿ ದಾವೆಯ ಅಂತಿಮ ಫಲಿತಾಂಶವನ್ನು ಕಾದಿರಿಸಿ ಸದರಿಯವರ ಕಾನೂನು ವಾರಸುದಾರರು ಮತ್ತು ಅವರ ಹೆಂಡತಿಯೂ ಆಗಿರುವ ಶ್ರೀಮತಿ ರಂಗಮ್ಮನವರ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಸಹಕಾರಿ ಕಾಯಿದೆ ಕಲಂ 103ರ ಅಡಿಯಲ್ಲಿ ತೀರ್ಪು ಪೂರ್ವ ಜಪ್ತಿ ಆದೇಶ ನೀಡಬೇಕಾಗಿ ಕೇಳಿರುತ್ತಾರೆ. ಈ ನ್ಯಾಯಾಲಯದಲ್ಲಿ ವಿಚಾರಣೆಯಲ್ಲಿರುವ ಅಧಿಭಾರ ಅರ್ಜಿ ಸಂಖ್ಯೆ: 8:2003-04 ರಲ್ಲಿ ಅಂತಿಮ ತೀರ್ಪು ಕಾದಿರಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ಈ ನ್ಯಾಯಾಲಯದ ದಾವೆಯ ತೀರ್ಪು ಪೂರ್ವ ಷೆಡ್ಯೂಲ್ ಆಸ್ತಿಯನ್ನು ಜಪ್ತಿ ಮಾಡಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

### ಜಪ್ತಿ ಆದೇಶ

**ನಂ:ಸಸಂಸನಿ:33:ಎಬಿಎನ್:ಡಿಡಿಎಸ್:41:2003-04 ದಿನಾಂಕ: 18ನೇ ಸೆಪ್ಟೆಂಬರ್ 2003**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ: 21.11.01ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿ

ಶ್ರೀ ಟಿ. ಮುರಳಿಕೃಷ್ಣಪ್ಪ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ, ಮಧುಗಿರಿ ಆದ ನಾನು ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ಗೋವಿಂದಪ್ಪ ಮಾಜಿ ಕಾರ್ಯದರ್ಶಿ ವ್ಯವಸಾಯ ಸೇವಾ ಸಹಕಾರ ಸಂಘ(ನಿ) ಹೊನ್ನಗೊಂಡನಹಳ್ಳಿ ಹೆಚ್.ಒ. ಮದಲೂರು, ಶಿರಾ ತಾಲ್ಲೂಕು, ಇವರ ಹೆಂಡತಿಯಾದ ಶ್ರೀಮತಿ ರಂಗಮ್ಮನವರ ಹೆಸರಿನಲ್ಲಿರುವ ಷೆಡ್ಯೂಲ್ ಸ್ಥಿರಾಸ್ತಿಗಳನ್ನು ನ್ಯಾಯಾಲಯದಲ್ಲಿ ವಿಚಾರಣೆಯಲ್ಲಿರುವ ದಾವೆಯ ಅಂತಿಮ ತೀರ್ಪಿಗೆ ಒಳಪಟ್ಟು ಆದೇಶ ಪೂರ್ವ ಜಪ್ತಿ ಆದೇಶ ಹೊರಡಿಸಿರುತ್ತೇನೆ.

ಶ್ರೀ ಗೋವಿಂದಪ್ಪ ಇವರ ಹೆಂಡತಿ ಶ್ರೀಮತಿ ರಂಗಮ್ಮನವರ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೆ ಅಥವಾ ಸ್ವತ್ತಿಗೆ ತತ್ಸಮಾನವಾದ ನಗದು ಭದ್ರತೆ ನೀಡುವರೆವಿಗೆ ವಿಲೇವಾರಿ ಮಾಡುವುದೇ ಆಗಲೀ ಪರಭಾರೆ ಮಾಡುವುದಾಗಲೀ ಅಥವಾ ವರ್ಗಾಯಿಸುವುದೇ ಆಗಲಿ ಮಾಡುವಂತಿಲ್ಲ. ಒಂದು ವೇಳೆ ಈ ಆದೇಶವನ್ನು ನಿರ್ಲಕ್ಷಿಸಿ ಮಾರಾಟ ಮಾಡಿದರೂ, ಈ ಸ್ವತ್ತುಗಳನ್ನು ಖರೀದಿಸಿದಲ್ಲಿ ಪರಭಾರೆ ಮಾಡಿದ್ದಲ್ಲಿ ಅಥವಾ ಇನ್ನೂ ಯಾವುದೇ ವಿಧದಲ್ಲಿ ವರ್ಗಾಯಿಸಿಕೊಂಡಲ್ಲಿ ಅದು ಸಿಂಧುವಾಗುವುದಿಲ್ಲ ಎಂದು ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರಲಾಗಿದೆ.

ದುರುಪಯೋಗದಾರರು ಈ ಜಪ್ತಿ ಆದೇಶದ ವ್ಯಾಪ್ತಿಯಿಂದ ಹೊರಬರಲು. ಇಚ್ಛಿಸಿದ್ದಲ್ಲಿ ಜಪ್ತಿಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ತಕ್ಕಷ್ಟು ಮತ್ತು ನ್ಯಾಯಾಲಯವು ಸರಿಯೆಂದು ಭಾವಿಸುವ ನಗದು ಭದ್ರತೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ ಮಧುಗಿರಿ ಇವರ ಹೆಸರಿನಲ್ಲಿ ತುಮಕೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ (ನಿ), ಮಧುಗಿರಿ ಶಾಖೆ ಮಧುಗಿರಿ ಈ ಬ್ಯಾಂಕನಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ ಈ ಬಗ್ಗೆ ಮೂಲ ಚಲನ್ ಪ್ರತಿಯನ್ನು ದಿನಾಂಕ: 20.10.03ರ ಒಳಗೆ ಈ ನ್ಯಾಯಾಲಯಕ್ಕೆ ಹಾಜರುಪಡಿಸುವುದರ ಮೂಲಕ ಜಪ್ತಿ ಆದೇಶದಿಂದ ಹೊರಗುಳಿಯಬಹುದೆಂದು ಸಹ ತಿಳಿಸಲಾಗಿದೆ. ಸದರಿ ನಿಗದಿತ ಅವಧಿಯೊಳಗೆ ನಗದು ಭದ್ರತೆ ನೀಡಲು ವ್ಯಾಜ್ಯದ ಎದುರು ಅರ್ಜಿದಾರರು ವಿಫಲರಾದಲ್ಲಿ ಈ ಷರತ್ತು ಪೂರ್ವಕ ಜಪ್ತಿ ಆದೇಶ ಸ್ಥಿರಗೊಳ್ಳುವುದಲ್ಲದೆ ಖಾಯಂಗೊಳ್ಳುವುದು ಎಂದು ತಿಳಿಯತಕ್ಕದ್ದು.

**ಷೆಡ್ಯೂಲ್**

| ಕ್ರ. ಸಂ. | ಖಾತೆದಾರರ ಹೆಸರು: ವಿಳಾಸ | ಖಾತೆ ನಂ | ಸರ್ವೆ ನಂ | ವಿಸ್ತೀರ್ಣ | ತರಹೆ | ಚೆಕ್ಕುಬಂದಿ |
|---|---|---|---|---|---|---|
| 1. | ರಂಗಮ್ಮ ಕೋಂ ಗೋವಿಂದಪ್ಪ ಇನಾಂಗೊಲ್ಲಹಳ್ಳಿ, ಕಸಬಾ ಹೋಬಳಿ, ಶಿರಾ ತಾಲ್ಲೂಕು ತುಮಕೂರು ಜಿಲ್ಲೆ. | 52 | 40 | 4.30 | ಖುಷ್ಕಿ | ಪೂರ್ವ: ಗೊಲ್ಲಹಳ್ಳಿ ರಸ್ತೆ<br>ಪಶ್ಚಿಮ: ಪಾಪಣ್ಣ, ಪೂ: ಗೋವಿಂದಪ್ಪನ ಜಮೀನು<br>ಉತ್ತರ : ಕೋಡಿಹಳ್ಳ<br>ದಕ್ಷಿಣ : ಗೋಮಾಳ(ಕೊಟ್ಟಪ್ಪನ ಬಗರ್‌ಹುಕ್ಕುಂ) |
| 2. | ರಂಗಮ್ಮ ಕೊಂ ಗೋವಿಂದಪ್ಪ ಗಿಡಗನಹಳ್ಳಿ, ಮದಲೂರು ಪಂಚಾಯ್ತಿ, ಶಿರಾ ತಾ: ತುಮಕೂರು ಜಿಲ್ಲೆ. | 89 ನಂ | 814 ಸ್ವತ್ತಿನ ನಂ | 32x24 ಅಡಿಗಳು | ವಾಸದ ಮನೆ | ಪೂರ್ವ: ಸ್ವಂತ ಖಾಲಿ ನಿವೇಶನ<br>ಪಶ್ಚಿಮ: ಈರಣ್ಣನವರ ಹಿಡುವಳಿ (ಕುರಿರೊಪ್ಪ)<br>ಉತ್ತರ : ದಾರಿ<br>ದಕ್ಷಿಣ : ಸ್ವಂತ ಹಿಡುವಳಿ |

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ನ್ಯಾಯಾಲಯದ ಮೊಹರಿನೊಂದಿಗೆ ದಿನಾಂಕ: 18.9.03 ರಂದು ನೀಡಿರುತ್ತೇನೆ.

**ಟಿ. ಮುರಳಿಕೃಷ್ಣಪ್ಪ**

ಪಿ.ಆರ್. 1107

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

## ಜಿಲ್ಲಾ ಅಧಿಕಾರಿಗಳ ಕಚೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು,

### ಪ್ರಕಟಣೆ

**ಸಂ:ಹಿಂವಅಇ:ಬೆಂಗ್ರಾ:ಬಿ3:ಸಿಆರ್-4:03-04 ಬೆಂಗಳೂರು ದಿನಾಂಕ: 25ನೇ ಆಗಸ್ಟ್ 2003.**

**ವಿಷಯ :** 2003-04ನೇ ಸಾಲಿನಲ್ಲಿ ಬೆಂಗಳೂರು (ಗ್ರಾ) ಜಿಲ್ಲೆಯಿಂದ ಅಲ್ಪಸಂಖ್ಯಾತರ ಕಾನೂನು ಪದವೀಧರರನ್ನು ನ್ಯಾಯಾಂಗ ಆಡಳಿತ ಹಾಗೂ ವಕೀಲ ವೃತ್ತಿಯ ತರಬೇತಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಬಗ್ಗೆ ಅರ್ಜಿಗಳನ್ನು ಕರೆಯುವ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಆದೇಶ ಸಂ:ಎಸ್‌ಡಬ್ಲ್ಯೂಎಲ್ 68 ಎಸ್‌ಇಡಬ್ಲ್ಯೂ 89 ದಿನಾಂಕ: 2.11.90
2. ಸರ್ಕಾರದ ಆದೇಶ ಸಂ:ಸಕಇ 205 ಬಿಎಂಎಸ್ 99 ದಿನಾಂಕ: 7.10.89.
3. ಈ ಕಚೇರಿಯ ಇದೇ ಸಮಸಂಖ್ಯೆಯ ಪತ್ರದ ದಿನಾಂಕ: 22.8.2003.

2003-04ನೇ ಸಾಲಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಸೇರಿರುವ ಮತೀಯ ಅಲ್ಪಸಂಖ್ಯಾತರಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧರು, ಸಿಖ್ಖರು ಹಾಗೂ ಪಾರ್ಸಿ ಸಮುದಾಯಕ್ಕೆ ಸೇರಿದ ಕಾನೂನು ಪದವೀಧರರಿಂದ ನ್ಯಾಯಾಂಗ ಆಡಳಿತದಲ್ಲಿ ಹಾಗೂ

ತರಬೇತಿ ಅವಧಿಯಲ್ಲಿ ತರಬೇತಿ ಭತ್ಯೆ ಮಂಜೂರಾತಿಗಾಗಿ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. ಆದರೆ ನಿಗದಿಪಡಿಸಿದ ಕೊನೆಯ ದಿನಾಂಕದವರೆಗೆ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರುಗಳಿಂದ ತರಬೇತಿ ಭತ್ಯೆ ಕೋರಿ ಅರ್ಜಿಗಳು ಬಾರದಿರುವುದರಿಂದ, ಮತ್ತೊಮ್ಮೆ ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕವನ್ನು 20.9.2003 ರವರೆಗೆ ವಿಸ್ತರಿಸಲಾಗಿದೆ. ಮತೀಯ ಅಲ್ಪಸಂಖ್ಯಾತರಿಗೆ ಸೇರಿದ ಈ ಕೆಳಕಂಡ ನಿಬಂಧನೆಗಳನ್ನು ಪಾಲಿಸಬಲ್ಲ ಕಾನೂನು ಪದವೀಧರ ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಯನ್ನು ಈ ಕಛೇರಿಯಲ್ಲಿ ಪಡೆದು, ಭರ್ತಿ ಮಾಡಲಾದ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳು, ಕಾನೂನು ಪದವೀಧರರ ಆಯ್ಕೆ ಸಮಿತಿ ಹಾಗೂ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ, ಡಾ: ಅಂಬೇಡ್ಕರ್ ಬೀದಿ, ಬೆಂಗಳೂರು ಇವರ ಕಛೇರಿಯಲ್ಲಿ ದಿನಾಂಕ: 20.9.2003 ರೊಳಗೆ ಸಲ್ಲಿಸುವುದು.

(1) ಅಭ್ಯರ್ಥಿಯು ಕಾನೂನು ಪದವಿಧರರಾಗಿದ್ದು ಈ ತರಬೇತಿಗೆ ಅರ್ಜಿಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು ಕಾನೂನು ಪದವಿ ಮುಗಿಸಿ 2 ವರ್ಷಗಳು ಮೀರಿರಬಾರದು.

(2) ಅಭ್ಯರ್ಥಿಗಳು ಮತೀಯ ಅಲ್ಪಸಂಖ್ಯಾತರ ಸಮುದಾಯವಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಸಿಖ್ಖರು, ಪಾರ್ಸಿ ಮತ್ತು ಬೌದ್ದರು ಇವುಗಳಿಗೆ ಸೇರಿರಬೇಕು. ಹಾಗೂ ಸರ್ಕಾರದಿಂದ ನಿಗದಿಪಡಿಸಲಾದ ಜಾತಿ ಆದಾಯ ಘೋಷಣಾ ಪತ್ರ ಹಾಗೂ ಪರಿಶೀಲನಾ ಪ್ರಮಾಣ ಪತ್ರಗಳಲ್ಲಿ ವಿವರಗಳನ್ನು ಭರ್ತಿ ಮಾಡಿ ಸಂಬಂಧಿಸಿದ ಅಧಿಕಾರಿಗಳ ದೃಢೀಕರಣದೊಂದಿಗೆ ಮೂಲ ಪ್ರಮಾಣ ಪತ್ರವನ್ನು ಭರ್ತಿ ಮಾಡಲಾದ ಅರ್ಜಿಯೊಂದಿಗೆ ಲಗತ್ತಿಸಿ ಸಲ್ಲಿಸಬೇಕು.

(3) ಅಭ್ಯರ್ಥಿಗಳು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿರಬೇಕು.

(4) ಭರ್ತಿ ಮಾಡಲಾದ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಲಾದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳ ವಯಸ್ಸು 30 ವರ್ಷಗಳು ಮೀರಿರಬಾರದು. ಆದರೆ ವರ್ಗ-1 ರ ಅಭ್ಯರ್ಥಿಗಳಿಗೆ ಒಂದು ವರ್ಷದ ರಿಯಾಯ್ತಿ ಇದ್ದು, ಅವರುಗಳಿಗೆ 31 ವರ್ಷ ಮೀರಿರಬಾರದು.

(5) ಅಭ್ಯರ್ಥಿಯ ಕೌಟುಂಬಿಕ ವಾರ್ಷಿಕ ವರಮಾನ ರೂ.15,000-00ಗಳಿಗೆ ಮೀರಿರಬಾರದು. ಆದರೆ ವರ್ಗ-1 ರಲ್ಲಿ ಬರುವ ಮತೀಯ ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಆದಾಯ ಮಿತಿ ಇರುವುದಿಲ್ಲ. ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ತರಬೇತಿ ಅವಧಿ ಇದ್ದು, ಈ ಮಧ್ಯದಲ್ಲಿ ತರಬೇತಿಯನ್ನು ಬಿಡಲು ಅವಕಾಶವಿರುವುದಿಲ್ಲ. ಆದರೆ ಕೇಂದ್ರ ಸರ್ಕಾರ: ರಾಜ್ಯ ಸರ್ಕಾರದ ಕೆಲಸ ಸಿಕ್ಕಿದ ಅಭ್ಯರ್ಥಿಗಳಿಗೆ ಈ ಬಗ್ಗೆ ರಿಯಾಯಿತಿ ಇರುತ್ತದೆ.

(6) ಆಯ್ಕೆಯಾದ ಅಭ್ಯರ್ಥಿಗೆ ತರಬೇತಿಯ ಅವಧಿಯಲ್ಲಿ ತಿಂಗಳಿಗೆ 1000-00 ರೂಗಳ ತರಬೇತಿ ಭತ್ಯೆಯನ್ನು ನೀಡಲಾಗುವುದು.

(7) ಆಯ್ಕೆಯಾದ ಅಭ್ಯರ್ಥಿಗಳಿಗೆ ಜಿಲ್ಲಾ ಆಯ್ಕೆ ಸಮಿತಿಯು ಪಬ್ಲಿಕ್ ಪ್ರಾಸಿಕ್ಯೂಟರ್ಸ್, ಸರ್ಕಾರಿ ವಕೀಲರು ಅಥವಾ 20 ವರ್ಷಗಳಿಗಿಂತ ಹೆಚ್ಚಿನ ವರ್ಷಗಳು ವಕೀಲ ವೃತ್ತಿಯಲ್ಲಿ ಸೇವೆ ಸಲ್ಲಿಸುತ್ತಿರುವ ಹಿರಿಯ ವಕೀಲರಲ್ಲಿ ಕಾನೂನು ತರಬೇತಿ ಪಡೆಯುವ ಸಲುವಾಗಿ ತರಬೇತಿಗೆ ಕಳುಹಿಸಿಕೊಡಲಾಗುವುದು.

(8) ಆಯ್ಕೆಯಾದ ಅಭ್ಯರ್ಥಿಯು ಈ ಇಲಾಖೆಯ ನಿಬಂಧನೆಗಳು ಹಾಗೂ ಸರ್ಕಾರದ ಆದೇಶಗಳಿಗೆ ಬದ್ದನಾಗಿರುತ್ತೇನೆಂದು ಮುಚ್ಚಳಿಕೆಯನ್ನು ಬರೆದುಕೊಡಬೇಕು.

(9) ಆಯ್ಕೆಯಾದ ಅಭ್ಯರ್ಥಿಯು ಸುಳ್ಳು ಮಾಹಿತಿ ನೀಡಿದಲ್ಲಿ ಅಥವಾ ತರಬೇತಿ ಅವಧಿಯ ಮಧ್ಯದಲ್ಲಿ ತರಬೇತಿಯಿಂದ ಬಿಟ್ಟುಹೋದಲ್ಲಿ ಸರ್ಕಾರ ಅವರಿಗಾಗಿ ಖರ್ಚು ಮಾಡಿದ ಹಣವನ್ನು ವರ್ಷಕ್ಕೆ ಶೇ.10 ರ ಬಡ್ಡಿಯೊಂದಿಗೆ ಭೂ ಕಂದಾಯ ಬಾಕಿ ಎಂದು ಪರಿಗಣಿಸಿ ವಸೂಲಿ ಮಾಡಲಾಗುವುದು.

(10) ಹೆಚ್ಚಿನ ಮಾಹಿತಿಯನ್ನು ಅಭ್ಯರ್ಥಿಗಳು ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ, ಡಾ:ಅಂಬೇಡ್ಕರ್ ಬೀದಿ, ಬೆಂಗಳೂರು-1 ಇವರ ಕಛೇರಿಯ ವೇಳೆಯಲ್ಲಿ ಪಡೆಯಬಹುದು.

(11) ಅರ್ಹ ಅಭ್ಯರ್ಥಿಗಳಿಗೆ ಆಯ್ಕೆ ಸಮಿತಿಯು ಸಂದರ್ಶನದ ದಿನಾಂಕ: ಹಾಗೂ ಸ್ಥಳಗಳನ್ನು ತಿಳಿಸಿದಾಗ ಸಂದರ್ಶನಕ್ಕೆ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

(12) ಅಭ್ಯರ್ಥಿಗಳು ಭರ್ತಿ ಮಾಡಲಾದ ಅರ್ಜಿಯೊಂದಿಗೆ ಅವಶ್ಯಕ ಮಾಹಿತಿಗಳಾದ ಕಾನೂನು ಪದವಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಪ್ರಮಾಣ ಪತ್ರ ಹಾಗೂ ಅಂಕಪಟ್ಟಿಗಳ ದೃಢೀಕರಣ ಪ್ರತಿ ಹಾಗೂ ಜನ್ಮದಿನಾಂಕದ ಆಧಾರಕ್ಕಾಗಿ ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಅಥವಾ ಟಿ.ಸಿ. ದೃಢೀಕೃತ ಪ್ರತಿಯನ್ನು ಲಗತ್ತಿಸಬೇಕು.

(13) ಅಪೂರ್ಣ ಮಾಹಿತಿಗಳಿಂದ ಕೂಡಿದ ಅರ್ಜಿಗಳನ್ನು ಹಾಗೂ ನಿಗದಿತ ದಿನಾಂಕದ ನಂತರ ಸ್ವೀಕೃತಿಯಾದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

(14) ಅರ್ಜಿಗಳನ್ನು ಸ್ವೀಕರಿಸುವ ಕಡೆಯ ದಿನಾಂಕ: 20.9.2003.

ಸದಸ್ಯ ಕಾರ್ಯದರ್ಶಿಗಳು,

ಪಿ.ಆರ್. 1108

ಹಾಗೂ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

## ಅಧಿಕೃತ ಅಧಿಕಾರಿಗಳು ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಕೋಲಾರ ವಿಭಾಗ, ಕೋಲಾರ ಇವರ ನ್ಯಾಯಾಲಯದಲ್ಲಿ

**ಸಂಖ್ಯೆ: ಎ4 (ಎ7)-ಎಸ್.ಓ.ಸಿ.-ಸಿಆರ್-33/ 2001-02**

**"ಕರ್ನಾಟಕ ಅರಣ್ಯ ಕಾಯಿದೆ 1963ರ 71 'ಎಫ್' ಅನ್ವಯ ಆದೇಶ"**

**ವಿಷಯ:** ಶ್ರೀಗಂಧದ ಪ್ರಕರಣಗಳಲ್ಲಿ ವಶಪಡಿಸಿಕೊಂಡ ವಾಹನಗಳನ್ನು ಮತ್ತು ಶ್ರೀಗಂಧವನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶ.

**ಪ್ರಸ್ತಾವನೆ:**

| | ಈ ನ್ಯಾಯಾಲಯದ ಆದೇಶಗಳ ಸಂಖ್ಯೆ | ವಾಹನಗಳು | ಶ್ರೀಗಂಧ |
|---|---|---|---|
| 1. | ಎ7-ಎಸ್.ಎ.ಎಸ್-ಸಿಆರ್-43/97-98 ದಿನಾಂಕ: 24-2-01 | MEW-6644 ಸ್ಕೂಟರ್ | 141 ತುಂಡುಗಳು |
| 2. | ಎ3-ಎಸ್.ಎ.ಎಸ್-ಸಿಆರ್-10/95-96 ದಿನಾಂಕ: 27-2-92 | MET-3528 ಸ್ಕೂಟರ್ | 25 ಕೆ. ಜಿ. |
| 3. | ಎ7-ಎಸ್.ಎ.ಎಸ್-ಶ್ರೀಗಂಧ-ಸಿಆರ್-46/ 97-98 ದಿನಾಂಕ: 20-10-01 | MEJ-1631 ಸ್ಕೂಟರ್ | 14 ತುಂಡುಗಳು |
| 4. | ಎ3-ಎಸ್.ಎ.ಎಸ್-ಸಿಆರ್-2/96-97 ದಿನಾಂಕ: 9-11-2000 | TN-29-W-8986 ಕಾರು (ಅಂಬಾಸಿಡರ್) | 550 ಕೆ. ಜಿ. |
| 5. | ಎ7-ಎಸ್.ಎ.ಎಸ್-ಸಿಆರ್-85/96-97 ದಿನಾಂಕ: 24-2-01 | TN-23-6278 ಕಾರು (ಅಂಬಾಸಿಡರ್) | 275 ಕೆ. ಜಿ. |
| 6. | ಎ3-ಎಸ್.ಎ.ಎಸ್-ಸಿಆರ್-88/96-97 ದಿನಾಂಕ: 31-12-02 | Yezdi Motar Cycle MEA-1860 | 39 ತುಂಡುಗಳು |
| 7. | ಎ7-ಎಸ್.ಎ.ಎಸ್-ಸಿಆರ್-1/92-93 ದಿನಾಂಕ: 9-11-2000 | MER-1106 ಕಾರು (ಫಿಯಟ್) | 50 ತುಂಡುಗಳು |

ಈ ಆದೇಶಗಳಲ್ಲಿ ಕರ್ನಾಟಕ ಅರಣ್ಯ ಕಾಯಿದೆ 1963 ರ 71 'ಎ' ವ್ಯಾಪ್ತಿಯಲ್ಲಿ ಮೇಲೆ ವಿವರಿಸಿದ ವಾಹನಗಳನ್ನು ಮತ್ತು ಅಕ್ರಮ ಸಾಗಾಣಿಕೆಯಾಗುತ್ತಿದ್ದ ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿ, ಆದೇಶಗಳ ವಿರುದ್ಧ ಆಕ್ಷೇಪಣೆಗಳಿದ್ದರೆ ಸಲ್ಲಿಸಲು 30 ದಿನಗಳ ಅವಧಿ ನಿಗದಿಪಡಿಸಿತ್ತು. ಆದರೆ ಇದುವರೆವಿಗೆ ಯಾರೂ ಯಾವುದೇ ವಾಹನದ ಆದೇಶಕ್ಕೆ ಆಕ್ಷೇಪಣೆ ಸಲ್ಲಿಸಿರುವುದಿಲ್ಲ. ಮತ್ತು ವಾಹನದ ಮಾಲೀಕತ್ವದ ವಿವರಗಳೊಡನೆ ಹಾಜರಾಗಿರುವುದಿಲ್ಲ.

ಈ ಕಾರಣ ಉಲ್ಲೇಖಿತ ಆದೇಶಗಳು ಸರ್ವತ್ರ ಊರ್ಜಿತವಾಗಿದ್ದು ಕರ್ನಾಟಕ ಅರಣ್ಯ ಕಾಯಿದೆ 1963 ರ 71 'ಎಫ್' ಅನ್ವಯ ಮೇಲಿನ ಆದೇಶಗಳಲ್ಲಿನ ವಾಹನಗಳನ್ನು ಸರ್ವತ್ರ ಸರ್ಕಾರದ ಸ್ವತ್ತೆಂದು ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಅರಣ್ಯ ಕಾಯಿದೆ 1963 ರ 71 'ಎಫ್' ಅನ್ವಯ ಕೆ. ಹೆಚ್. ನಾಗರಾಜ್ ಆದ ನಾನು ಶ್ರೀಗಂಧದ ಅಕ್ರಮ ಸಾಗಾಣಿಕೆಯಲ್ಲಿ ವಶಪಡಿಸಿಕೊಂಡು ಈಗಾಗಲೇ ಸರ್ಕಾರಕ್ಕೆ ಕರ್ನಾಟಕ ಅರಣ್ಯ ಕಾಯಿದೆ 1963 ರ 71 'ಎ' ಯಿಂದ 'ಜಿ' ವರೆಗಿನ ಕಾಯಿದೆಯಡಿ ಮುಟ್ಟುಗೋಲು ಹಾಕಿಕೊಂಡಿರುವ ಈ ಕೆಳಗಿನ ವಾಹನಗಳನ್ನು ಸರ್ವತಹ ಸರ್ಕಾರದ ಸ್ವತ್ತೆಂದು ಈ ದಿನ ಅಂದರೆ ದಿನಾಂಕ: 5-8-2003 ರಂದು ಈ ನ್ಯಾಯಾಲಯದಲ್ಲಿ ನನ್ನ ಸಹಿ ಮತ್ತು ಮೊಹರು ಹಾಕಿ ಆದೇಶಿಸಿರುತ್ತೇನೆ.

ಎಲ್ಲಾ ಮೊಕದ್ದಮೆಗಳ ಶ್ರೀಗಂಧವು ಸರ್ಕಾರದ ಸ್ವತ್ತಾಗಿದ್ದು ಪರಿವರ್ತನೆಗೆ ಒಳಪಟ್ಟಿರುತ್ತದೆ.

ಅಧಿಕೃತ ಅಧಿಕಾರಿಗಳು ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು
ಕೋಲಾರ ವಿಭಾಗ, ಕೋಲಾರ.

ಪಿ. ಆರ್. 1111

## ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆ

**ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-560 029**

**ಸಂಖ್ಯೆ: ಈಎಸ್‌ಟಿ-3/ ಸಿಡಿಎಸ್/ ಸಿಆರ್-73/ 2001-02/ 4481, ದಿನಾಂಕ: 19ನೇ ಸೆಪ್ಟೆಂಬರ್, 2003**

**ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶಕರು, ಬೆಂಗಳೂರು ಕರ್ನಾಟಕದಲ್ಲಿ, ಇವರ ನಡವಳಿಗಳು**

**ವಿಷಯ:** ಶ್ರೀ ಎಸ್. ಬಾಲಸುಬ್ರಮಣ್ಯಂ, ಅಧೀಕ್ಷಕ ಅವರ ಅನಧಿಕೃತ ಗೈರುಹಾಜರಿ ಬಗ್ಗೆ ಇಲಾಖಾ ವಿಚಾರಣೆ-ಇಲಾಖೆಯ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಿ ಆದೇಶ.

**ಉಲ್ಲೇಖ:**
1. ಈ ಕಛೇರಿಯ ತಿಳುವಳಿಕೆ ಪತ್ರದ ಸಂಖ್ಯೆ: ಇಎಸ್‌ಟಿ-1/ಸಿಸಿಎ/ ಸಿಆರ್-1/ 2002-03, ದಿನಾಂಕ: 05-03-2003.
2. ಸರ್ಕಾರದ ಪತ್ರದ ಸಂಖ್ಯೆ: ಕಾಇ 34 ಕಾಬಾಸೇ 2003, ದಿ: 26-8-2003.
3. ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 18 ಸೇಇವಿ 2001. ದಿ: 14-9-2001.

**ಪ್ರಸ್ತಾವನೆ:**

ಶ್ರೀ ಎಸ್. ಬಾಲಸುಬ್ರಮಣ್ಯಂ, ಅಧೀಕ್ಷಕರು ಅವರು ದಿನಾಂಕ: 19-4-2001 ರಿಂದ 30-6-2001ರವರೆಗೆ ಹಾಗೂ 29-9-2001 ರಿಂದ 20-3-2002 ರವರೆಗಿನ (ಈ ದಿನಾಂಕದವರೆಗೂ ಅನಧಿಕೃತ ಗೈರು ಹಾಜರಿ ಮೇಲಿರುತ್ತಾರೆ) ಅನಧಿಕೃತ ಗೈರು ಹಾಜರಿ ಬಗ್ಗೆ ನಿಯಮ 11ರಡಿಯಲ್ಲಿ ವಿಚಾರಣೆ ನಡೆಸಿ ವರದಿ ನೀಡಲು ಜೂನ್ 2002ರಲ್ಲಿ ವಿಚಾರಣಾಧಿಕಾರಿಯವರನ್ನು ನೇಮಿಸಲಾಗಿತ್ತು. ಸದರಿ ಆಪಾದಿತ

ನೌಕರರು ಯಾವುದೇ ದಿನದಂದು ವಿಚಾರಣೆಗೆ ಹಾಜರಾಗದೆ ಹಾಗೂ ಎಷ್ಟೇ ತಿಳುವಳಿಕೆ / ಕಾಲಾವಕಾಶ ನೀಡಿದರೂ ವಿಚಾರಣೆ ಸಂಬಂಧ ಯಾವುದೇ ಅಹವಾಲುಗಳನ್ನು ಸಲ್ಲಿಸದೇ ಇರುವುದರಿಂದ ವಿಚಾರಣಾಧಿಕಾರಿಯವರು ಏಕಪಕ್ಷೀಯವಾಗಿ ತೀರ್ಮಾನ ತೆಗೆದುಕೊಂಡು ಆಪಾದನೆಗಳು ಸಾಬೀತಾಗಿರುವುದಾಗಿ ವರದಿ ನೀಡಿರುತ್ತಾರೆ. ಕರ್ತವ್ಯದ ಮೇಲೆ ಹಾಜರಾಗಲು ಹಾಗೂ ಅವರ ಸಮಜಾಯಿಷಿಗಳೇನಾದರೂ ಇದ್ದಲ್ಲಿ ಸಲ್ಲಿಸಲು ಈ ಕಛೇರಿಯಿಂದಲೂ ಅವರಿಗೆ ಸಾಕಷ್ಟು ತಿಳುವಳಿಕೆ ನೀಡಿದೆ. ಯಾವುದಕ್ಕೂ ಅವರಿಂದ ಸಮಜಾಯಿಷಿ ಇರುವುದಿಲ್ಲ. ವಿಚಾರಣಾಧಿಕಾರಿಯವರ ವರದಿಯ ಅಂಶಗಳನ್ನು ಹಾಗೂ ವಿಧಿಸಲಿಚ್ಛಿಸಿರುವ ದಂಡನೆಯನ್ನು ಆಪಾದಿತ ನೌಕರನ ಗಮನಕ್ಕೆ ತಂದು (ಉಲ್ಲೇಖ-1) ಅಹವಾಲುಗಳೇನಾದರೂ ಇದ್ದಲ್ಲಿ ಸಲ್ಲಿಸಲು ಅವಕಾಶ ನೀಡಲಾಗಿತ್ತು. ದಿನಾಂಕ: 12-03-2003ರ ಮನವಿಯಲ್ಲಿ ಅವರ ಅಹವಾಲನ್ನು ಸಲ್ಲಿಸುತ್ತಾ ಯಾವುದಾದರೂ ಲಘು ದಂಡನೆಯನ್ನು ವಿಧಿಸಲು ಕೋರಿಕೊಂಡಿರುತ್ತಾರೆ. ಅವರ ವಿವರಣೆ ಸಮರ್ಪಕವಿಲ್ಲದ್ದರಿಂದ ಒಪ್ಪಿಕೊಂಡಿರುವುದಿಲ್ಲ. ಅಲ್ಲದೇ ವಿಚಾರಣೆಗೆ ಒಳಪಟ್ಟಿರುವ ಅವಧಿ ಸುಮಾರು 246 ದಿನಗಳಾಗಿದ್ದು (73+173) ಸರ್ಕಾರದ ಸುತ್ತೋಲೆ (ಉಲ್ಲೇಖ-3) ಯಂತೆ ನಾಲ್ಕು ತಿಂಗಳು ಮೀರಿದ ಅನಧಿಕೃತ ಗೈರುಹಾಜರಿಗೆ ಸೇವೆಯಿಂದ ತೆಗೆದುಹಾಕುವ ದಂಡನೆಯನ್ನು ವಿಧಿಸಬೇಕೆಂದಿರುತ್ತದೆ. ಅವರ ಹಿಂದಿನ ಸೇವಾ ವಿವರಗಳನ್ನು ಪರಿಶೀಲಿಸಿದಾಗ ಈ ಹಿಂದೆಯೂ ಸಹ ಇಂತಹುದೇ ಅನಧಿಕೃತ ಗೈರುಹಾಜರಿಗಳ ಬಗ್ಗೆ ವಿಚಾರಣೆ ನಡೆಸಿ ವೇತನ ಬಡ್ತಿಗಳನ್ನು ತಡೆಹಿಡಿಯುವ, ಅಧೀಕ್ಷಕರ ಹುದ್ದೆಯಿಂದ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ಹಿಂಬಡ್ತಿ ನೀಡಿರುವ ದಂಡನೆಗಳನ್ನು ವಿಧಿಸಲಾಗಿದೆ. ಈಗ ಸದರಿ ವಿಚಾರಣೆಗೆ ಒಳಪಡಿಸಿರುವ ಒಟ್ಟು 246 ದಿನಗಳ ನಂತರವೂ ಸಹ ಅವರು ದಿನಾಂಕ: 21-03-2002 ರಿಂದ ಸತತವಾಗಿ ಅನಧಿಕೃತ ಗೈರು ಹಾಜರಿ ಮೇಲೆ ಇದ್ದು ಇಂದಿನವರೆಗೂ ಕರ್ತವ್ಯದ ಮೇಲೆ ಹಾಜರಾಗಿರುವುದಿಲ್ಲ. ಈ ನಡುವೆ ಅವರು ವಿಚಾರಣೆಗೆ ಆದೇಶವಾದ ನಂತರ ಸ್ವಯಂ ನಿವೃತ್ತಿ ಕೋರಿ ಮನವಿ ಸಲ್ಲಿಸಿರುವುದನ್ನು ಪರಿಶೀಲಿಸಿ ಅವರು ವಿಚಾರಣಾಧೀನ ನೌಕರರಾಗಿದ್ದ ಕಾರಣ ಸ್ವಯಂ ನಿವೃತ್ತಿಯನ್ನು ಒಪ್ಪಿಕೊಂಡಿರುವುದಿಲ್ಲ. ಈ ಬಗ್ಗೆಯೂ ಸಹ ಮತ್ತೆ ಅವರು ಯಾವುದೇ ಪುನರ್ ಮನವಿ ಸಲ್ಲಿಸಿರುವುದಿಲ್ಲ. ಈ ರೀತಿ ವಿಚಾರಣೆಗೂ ಸಹಕರಿಸದೆ, ಕಛೇರಿ ಪತ್ರಗಳಿಗೆ ಉತ್ತರವನ್ನೂ ನೀಡದೆ ಕೆಲಸದ ಮೇಲೂ ಹಾಜರಾಗದೆ ಇಷ್ಟು ದಿನಗಳ ಕಾಲ ಅನಧಿಕೃತವಾಗಿ ಕರ್ತವ್ಯದಿಂದ ದೂರ ಉಳಿದಿರುವುದನ್ನು ಗಮನಿಸಿದಾಗ ಸದರಿ ನೌಕರರಿಗೆ ಸರ್ಕಾರಿ ಸೇವೆಯಲ್ಲಿ ಇಚ್ಛೆ ಇಲ್ಲವೆಂಬುದು ವ್ಯಕ್ತವಾಗುತ್ತದೆ. ಈ ಕಾರಣಕ್ಕಾಗಿ ಇವರ ಮೇಲೆ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸುವುದು ಸೂಕ್ತವೆಂಬ ತೀರ್ಮಾನಕ್ಕೆ ಬಂದು ಉಲ್ಲೇಖ-2ರ ಪತ್ರದಲ್ಲಿ ಪಡೆದುಕೊಂಡಿರುವ ಸರ್ಕಾರದ ಅನುಮತಿಯೊಡನೆ ಈ ಮುಂದಿನ ಆದೇಶ ಹೊರಡಿಸಿದೆ.

**ಆದೇಶ**

ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ, ಅಪೀಲು ಮತ್ತು ಮೇಲ್ಮನವಿ) ನಿಯಮಗಳು 1957 ರ 11ನೇ ನಿಯಮದಡಿ ವಿಚಾರಣೆ ನಡೆಸಿ 9ನೇ ನಿಯಮದ ಮೂಲಕ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಶ್ರೀ ಕೆ. ಜಿ. ಕೃಷ್ಣಪ್ಪ, ನಿರ್ದೇಶಕರು, ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆ, ಬೆಂಗಳೂರು (ಶಿಸ್ತು ಪ್ರಾಧಿಕಾರ) ಆದ ನಾನು ಸದರಿ ನಿಯಮಾವಳಿಯ 8 (VIII) ನೇ ನಿಯಮದಲ್ಲಿ ನಿರ್ದಿಷ್ಟಪಡಿಸಿರುವ "ಸೇವೆಯಿಂದ ವಜಾ ಮಾಡುವ ದಂಡನೆಯನ್ನು" ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಶ್ರೀ ಎಸ್. ಬಾಲಸುಬ್ರಮಣ್ಯಂ, ಅಧೀಕ್ಷಕರು, (ಅನಧಿಕೃತ ಗೈರು ಹಾಜರಿ) ಅವರ ಮೇಲೆ ಈ ಮೂಲಕ ವಿಧಿಸಿದ್ದೇನೆ.

**ಕೆ. ಜಿ. ಕೃಷ್ಣಪ್ಪ**

ಪಿ. ಆರ್. 1112

ನಿರ್ದೇಶಕರು,

ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆ, (ಶಿಸ್ತು ಪ್ರಾಧಿಕಾರ) ಬೆಂಗಳೂರು.

## ಜಿಲ್ಲಾ ದಂಡಾಧಿಕಾರಿಗಳವರ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಪ್ರಕಟಣೆ ಸಂಖ್ಯೆ: ಎಂಎಜಿ-2/ ಸಿ ಆರ್-915/ 2001-02, ದಿನಾಂಕ: 22ನೇ ಸೆಪ್ಟೆಂಬರ್, 2003**

**ವಿಷಯ:** ಶಿವಮೊಗ್ಗ-ಹೊನ್ನಾಳಿ ರಸ್ತೆಯಲ್ಲಿನ ವಾಹನ ಸಂಚಾರವನ್ನು ತಾತ್ಕಾಲಿಕವಾಗಿ ಬದಲಾಯಿಸಿ ಹೊರಡಿಸಿದ ಪ್ರಕಟಣೆಯನ್ನು ಹಿಂದಕ್ಕೆ ಪಡೆಯುವ ವಿಚಾರವಾಗಿ.

**ಉಲ್ಲೇಖ:**
1. ಈ ಕಾರ್ಯಾಲಯದ ಸಮಸಂಖ್ಯೆ ಪ್ರಕಟಣೆ ದಿನಾಂಕ: 6/ 2002.
2. ಯೋಜನಾ ನಿರ್ದೇಶಕರು, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ, ಬೆಂಗಳೂರು ಇವರ ಪತ್ರ ಸಂ: ಕ.ರಾ.ಹೆ.ಅ.ಯೋ/ 1607/ 03-04, ದಿನಾಂಕ: 29-8-2003.

ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆಯಡಿಯಲ್ಲಿ, ರಾಜ್ಯ ಹೆದ್ದಾರಿ ಸಂಖ್ಯೆ 25ನ್ನು ಮರಿಯಮ್ಮನ ಹಳ್ಳಿಯಿಂದ ಶಿವಮೊಗ್ಗದವರೆಗೆ ಪುನಶ್ಚೇತನಗೊಳಿಸುವ ಸಲುವಾಗಿ ಪ್ರಾಥಮಿಕ ಹಂತವಾಗಿ ಹೊನ್ನಾಳಿ-ಹೊಳಲೂರು -ಶಿವಮೊಗ್ಗ ರಸ್ತೆಯ ಕಾಮಗಾರಿಯನ್ನು ಶಿವಮೊಗ್ಗದಿಂದ ಪ್ರಾರಂಭಿಸುವ ಸಲುವಾಗಿ ಮತ್ತು ಕಾಮಗಾರಿಯು ಸಮರ್ಪಕವಾಗಿ ಪೂರೈಸುವ ಉದ್ದೇಶಕ್ಕಾಗಿ ಸದರಿ ಹೆದ್ದಾರಿ ರಸ್ತೆಯಲ್ಲಿ ಓಡಾಡುತ್ತಿದ್ದ ತಡೆರಹಿತ ವಾಹನಗಳ ಸಂಚಾರವನ್ನು ತಾತ್ಕಾಲಿಕವಾಗಿ ಬದಲಾಯಿಸಿ ಪ್ರಕಟಣೆಯನ್ನು ಹೊರಡಿಸಲಾಗಿತ್ತು.

ಸದರಿ ಸಂಚಾರಿ ಮಾರ್ಗದ ಬದಲಾವಣೆಯ ಪ್ರಕಟಣೆಯನ್ನು ಅಂತಿಮಗೊಳಿಸಿ, ರಾಜ್ಯಪತ್ರದ ಪುಟಸಂಖ್ಯೆ 1659, ಭಾಗ-3ರಲ್ಲಿ ಪ್ರಕಟಿಸಲಾಗಿತ್ತು.

ಉಲ್ಲೇಖ-2ರ ಪತ್ರದಲ್ಲಿ ಯೋಜನಾ ನಿರ್ದೇಶಕರು, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ ಬೆಂಗಳೂರು ಇವರು ರಾಷ್ಟ್ರೀಯ ಹೆದ್ದಾರಿ ಸಂ 25ರ ಶಿವಮೊಗ್ಗ -ಹೊಳಲೂರು-ಹೊನ್ನಾಳಿ ರಸ್ತೆಯ ಕಾಮಗಾರಿ ಪೂರ್ಣಗೊಂಡಿದ್ದು, ವಾಹನ ಸಂಚಾರವನ್ನು ಈ

ಮಾರ್ಗದಲ್ಲಿ ಮಾಡಬಹುದಾಗಿದ್ದರಿಂದ, ತಾತ್ಕಾಲಿಕವಾಗಿ ಸಂಚಾರ ಮಾರ್ಗ ಬದಲಾವಣೆಗೆ ಉಲ್ಲೇಖ -1ರಂತೆ ಹೊರಡಿಸಿದ ಪ್ರಕಟಣೆಯನ್ನು ಹಿಂದಕ್ಕೆ ಪಡೆಯುವಂತೆ ಕೋರಿರುತ್ತಾರೆ.

ಉಲ್ಲೇಖಿತ ಪ್ರಸ್ತಾವನೆಯನ್ನು ಪರಿಶೀಲಿಸಿ, ಉಲ್ಲೇಖ-1ರಂತೆ ಹೊರಡಿಸಿದ ಪ್ರಕಟಣೆಯನ್ನು ಹಿಂದಕ್ಕೆ ಪಡೆದು, ಈ ಮೊದಲು ಇದ್ದಂತೆ ಶಿವಮೊಗ್ಗ -ಹೊಳಲೂರು- ಹೊನ್ನಾಳಿ ಮಾರ್ಗವಾಗಿ ಬಸ್ಸುಗಳನ್ನು ಓಡಿಸಲು ಆದೇಶ ಹೊರಡಿಸಿದೆ.

ಪಿ. ಆರ್. 1113 ಜಿಲ್ಲಾ ದಂಡಾಧಿಕಾರಿ, ಶಿವಮೊಗ್ಗ ಜಿಲ್ಲೆ.

## ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯವಹಿಗಳು

**ವಿಷಯ:** ಸಮಾಪನೆಯಲ್ಲಿರುವ ಹಾಲು ಉತ್ಪಾದಕರು ಸಹಕಾರ ಸಂಘ ನಿ., ಕುರುಬರ ಹಳ್ಳಿ, ತುರುವೇಕೆರೆ ತಾಲ್ಲೂಕು ಇದನ್ನು ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿ ಆದೇಶ ಸಂಖ್ಯೆ: ಡಿಆರ್‌ಟಿ: ಎಲ್‌ಕ್ಯೂಡಿ: 135: 96-97, ದಿನಾಂಕ: 30-4-2002.
2. ಸಹಕಾರ ಅಭಿವೃದ್ಧಿ ಅಧಿಕಾರಿ, ತುರುವೇಕೆರೆ ಇವರ ಪತ್ರ ಸಂಖ್ಯೆ: ಸಅಅ: ತು: 53: 2002-03, ದಿನಾಂಕ: 29-6-2002.
3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಇವರ ಪತ್ರ ಸಂಖ್ಯೆ: ಸನಿ-34: ಎಲ್‌ಕ್ಯೂಡಿ: 2003-04, ದಿನಾಂಕ: 5-9-2003.

**ಪ್ರಸ್ತಾವನೆ:**

ತುಮಕೂರು ಜಿಲ್ಲೆ, ತುರುವೇಕೆರೆ ತಾಲ್ಲೂಕು, ಕುರುಬರ ಹಳ್ಳಿ, ಹಾಲು ಉತ್ಪಾದಕರ ಸಹಕಾರ ಸಂಘ ನಿ. ಈ ಸಂಘವು ಕಾರ್ಯನಿರ್ವಹಿಸದೆ ಸ್ಥಗಿತಗೊಂಡಿದ್ದುದರಿಂದ ಉಲ್ಲೇಖ (1)ರ ರೀತ್ಯಾ ಈ ಕಛೇರಿ ಆದೇಶದ ಮೇರೆಗೆ ಸಂಘವನ್ನು ಸಮಾಪನೆಗೊಳಿಸಲಾಗಿತ್ತು. ಉಲ್ಲೇಖ (2)ರ ರೀತ್ಯ ಸಹಕಾರ ಅಭಿವೃದ್ಧಿ ಅಧಿಕಾರಿಯವರು ಸಂಘವನ್ನು, ಪುನಃಶ್ಚೇತನಗೊಳಿಸಲು ಸಂಘದ ಠರಾವಿನ ಪ್ರತಿಯೊಂದಿಗೆ ಪತ್ರ ಸಲ್ಲಿಸಿದ್ದು ಹಾಗೂ ಉಲ್ಲೇಖ (3) ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಇವರು ವ್ಯವಸ್ಥಾಪಕರು, ತುಮಕೂರು ಸಹಕಾರಿ ಹಾಲು ಒಕ್ಕೂಟ ನಿ. ಇವರ ವರದಿಯ ಮೇರೆಗೆ ಈ ಕಛೇರಿಗೆ ಸಂಘವನ್ನು ಪುನಃಶ್ಚೇತನಗೊಳಿಸಲು ಮುಂದಿನ ಕ್ರಮ ಕೋರಿ ಪತ್ರ ಸಲ್ಲಿಸಿರುತ್ತಾರೆ, ಪ್ರಯುಕ್ತ ಈ ಬಗ್ಗೆ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ ನಂ: ಡಿಆರ್‌ಟಿ: ಎಲ್‌ಕ್ಯೂಡಿ: 135: 96-97, ದಿನಾಂಕ: 19ನೇ ಸೆಪ್ಟೆಂಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಗಮನಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72 (3) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ: 69: ಸಿಎಲ್‌ಎಂ: 2001: ದಿನಾಂಕ: 21-11-2001ರ ಮೇರೆಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಮೊಹಮದ್ ಸಲೀಂ, ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ತುರುವೇಕೆರೆ ತಾಲ್ಲೂಕು ಕುರುಬರ ಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಈ ಸಂಘವು ತನ್ನ ಕಾರ್ಯ ಚಟುವಟಿಕೆಗಳನ್ನು ಪುನರಾರಂಭಿಸಿ ಉತ್ತಮವಾಗಿ ಕಾರ್ಯ ನಿರ್ವಹಿಸುವಂತೆ ಅಗತ್ಯ ಕ್ರಮಗಳನ್ನು ಕೈಗೊಳ್ಳಲು ತಿಳಿಸಿ ಉಲ್ಲೇಖ (1) ರ ಸಮಾಪನೆ ಆದೇಶವನ್ನು ರದ್ದುಪಡಿಸಿ ಸಂಘವನ್ನು ಪುನಃಶ್ಚೇತನಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶವನ್ನು ದಿನಾಂಕ: 19-09-2003 ರಂದು ನನ್ನ ಹಸ್ತಾಕ್ಷರ ಮತ್ತು ಕಚೇರಿ ಮುದ್ರೆಯೊಂದಿಗೆ ನೀಡಿರುತ್ತೇನೆ.

**ಮೊಹಮದ್ ಸಲೀಂ**

ಪಿ. ಆರ್. 1114 ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು.

## ಪ್ರಾಂಶುಪಾಲರ ಕಛೇರಿ, ಸರ್ಕಾರಿ ಶುಶ್ರೂಷಾ ಮಹಾವಿದ್ಯಾಲಯ, ಬೆಂಗಳೂರು

## ಅಧಿಕೃತ ಜ್ಞಾಪನಾ ಪತ್ರ

## ಸಂಖ್ಯೆ: ಶುಮವಿ: ಸಿಬ್ಬಂದಿ : 53: 2003-04, ದಿನಾಂಕ: 19ನೇ ಸೆಪ್ಟೆಂಬರ್, 2003

**ವಿಷಯ:** ಬೆಂಗಳೂರಿನ ಸರ್ಕಾರಿ ಶುಶ್ರೂಷಾ ಮಹಾವಿದ್ಯಾಲಯದ ಸಹಾಯಕ ಪ್ರಾಧ್ಯಾಪಕರ ಡಾ: ಬಿ. ಟಿ. ಬಸವಂತಪ್ಪ ಇವರ ಅಮಾನತ್ತು ಆದೇಶವನ್ನು ತೆರವುಗೊಳಿಸಿದ್ದು ಕರ್ತವ್ಯಕ್ಕೆ ಹಾಜರಾದ ಬಗ್ಗೆ.

**ಉಲ್ಲೇಖ:**
1. ಕರ್ನಾಟಕ ಸರ್ಕಾರದ ಅಧಿಸೂಚನಾ ಸಂಖ್ಯೆ: ಆಕುಕ: 140: ಎಂಎಂಸಿ: 2003, ದಿನಾಂಕ: 19.9.2003
2. ಸರ್ಕಾರಿ ಆದೇಶ ಸಂಖ್ಯೆ: ಆಕುಕ: 438: ಎಂಎಸ್‌ಎಫ್: 2002: ಬೆಂಗಳೂರು, ದಿನಾಂಕ: 24.6.2003

ಉಲ್ಲೇಖ (1)ರ ಸರ್ಕಾರಿ ಅಧಿಸೂಚನೆಯಲ್ಲಿ ಡಾ: ಬಿ. ಟಿ. ಬಸವಂತಪ್ಪ, ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಶುಶ್ರೂಷಾ ಮಹಾವಿದ್ಯಾಲಯ, ಬೆಂಗಳೂರು ಇವರ ಅಮಾನತ್ತಿನಲ್ಲಿಟ್ಟಿದ್ದ ಆದೇಶವನ್ನು ತೆರವುಗೊಳಿಸಿದ್ದು ತಕ್ಷಣದಿಂದ ಜಾರಿಗೆ ಬರುವಂತೆ ಸಹಾಯಕ ಪ್ರಾಧ್ಯಾಪಕರ ಹುದ್ದೆಗೆ ನೇಮಿಸಲಾಗಿದ್ದು ದಿನಾಂಕ: 19-9-2003ರಂದು ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಆದ್ದರಿಂದ ತಮ್ಮ ವಿಭಾಗದ ಪೂರ್ಣ ಪ್ರಭಾರವನ್ನು ಡಾ: ಬಿ. ಎ. ಪಟಾಲಯ್ಯ, ಉಪನ್ಯಾಸಕರು, ಇವರಿಂದ ಪಡೆದು ಪ್ರಭಾರ ವರ್ಗಾವಣೆ ಪ್ರಮಾಣ ಪತ್ರದೊಂದಿಗೆ ವರದಿಯನ್ನು ಸಲ್ಲಿಸಲು ತಿಳಿಸಲಾಗಿದೆ.

ಪ್ರಾಂಶುಪಾಲರು,

ಪಿ. ಆರ್. 1115 ಸರ್ಕಾರಿ ಶುಶ್ರೂಷಾ ಮಹಾವಿದ್ಯಾಲಯ, ಬೆಂಗಳೂರು-2.

**CAZENOVA INDIA (HOLDINGS) PRIVATE LIMITED**
**(UNDER LIQUIDATION)**
**FORM No. 151**
**(See Rule 315)**
**Member's Voluntary Winding-up**
**Notice of appointment of liquidator pursuant to section 516**

| | |
|---|---|
| Name of Company | CAZENOVE INDIA (HOLDINGS) PRIVATE LIMITED (Under Liquidation) |
| No. of Company | 08/ 22725 |
| Nature of Business | Stock broking, Merchant Banking/ under writing |
| Address of Registered Office | No. 141, K, 1st Floor, Ist Main, Ist Block, Dr. Rajkumar Road, Rajajinagar, Bangalore- 560 010. |
| Name (s) and address(es) of Liquidator(s) | P. SUDARSANAM<br>No. 131, 2nd Cross, 13th Main, B. T. M. Ist Stage, Bangalore -560 068,<br>Appointed in the place of Mr. K. Kumar Resigned. |
| Date of appointment | 30-09-2003 |
| By whom appointed | By Members of the Company at an Extraordinary General Meeting held on 30th September 2003. |

Place: Bangalore
Date: 01-10-2003

For Cazenove India (Holdings) Pvt. Limited
(Under Liquidation)
**P. SUDARSANAM**
Liquidator.

**ಕಂಪನಿ ಕಾಯ್ದೆಯ 516 ನೇ ಸೆಕ್ಷನ್ (ವಿಧಿ) 315 ಕಂಪನಿ (ನ್ಯಾಯಾಲಯದ) ಫಾರಂ 151 ನ್ನು ದಯವಿಟ್ಟು -ನೋಡಿ.**
**ಸರ್ಕಾರಿ ಗೆಜೆಟ್ ಮತ್ತು ವೃತ್ತ -ಪತ್ರಿಕೆಗಳಲ್ಲಿ ಪ್ರಕಟಣೆಗೋಸ್ಕರ ಕಂಪನಿಯ ನಿಯಮದ ಪರಿಚ್ಛೇದ (516)ರ ಪ್ರಕಾರ**
**ಕಂಪನಿಯನ್ನು ಮುಚ್ಚುವ ಮುನ್ನ ಲೇಣಿ, ದೇಣಿಯ ವ್ಯವಸ್ಥಾಪಕರಗಳನ್ನು ನಿಯಮಿಸಲು ಪರಿಚ್ಛೇದ 516ರ ಪ್ರಕಾರ ಸಂಬಂಧಪಟ್ಟ ತಿಳುವಳಿಕೆ (ನೋಟೀಸ್)**

| | |
|---|---|
| ಕಂಪನಿಯ ಹೆಸರು ಮತ್ತು ರಿ: ನಂ. | ಕ್ಯಾಜಿನೋವ್ ಇಂಡಿಯಾ (ಹೋಲ್ಡಿಂಗ್ಸ್) ಪ್ರೈ. ಲಿಮಿಟೆಡ್<br>(ಮುಚ್ಚುವ ಸ್ಥಿತಿಯಲ್ಲಿರುವ)<br>08/ 22725 |
| ವ್ಯವಹಾರದ ವಿವರ | ಷೇರ್ ಮತ್ತು ಸ್ಟಾಕ್‌ಗಳನ್ನು ದಲ್ಲಾಳಿಯಾಗಿ ಕೊಳ್ಳುವುದು ಮಾರುವುದು. ವ್ಯಾಪಾರಸ್ಥರ ಬ್ಯಾಂಕಿನ ವ್ಯವಹಾರ-ಕಂಪನಿಗಳ ಅಥವಾ ಸಂಸ್ಥೆಗಳ ಬಂಡವಾಳ ಒದಗಿಸಿಕೊಡುವುದು. |
| ರಿಜಿಸ್ಟರ್ಡ್ ಆಫೀಸಿನ ಶಾಶ್ವತ ವಿಳಾಸ: | 141, ಕೆ, 1ನೇ ಅಂತಸ್ತು, 1ನೇ ಮುಖ್ಯರಸ್ತೆ, 1ನೇ ಬ್ಲಾಕ್,<br>ಡಾ: ರಾಜ್‌ಕುಮಾರ್ ರಸ್ತೆ, ರಾಜಾಜಿನಗರ, ಬೆಂಗಳೂರು-560 010. |
| ಲೇಣಿ ದೇಣಿ ವ್ಯವಸ್ಥಾಪಕರ ಹೆಸರು ಮತ್ತು ವಿಳಾಸ | ಪಿ. ಸುದರ್ಶನಂ,<br>ನಂ. 131, 2ನೇ ಕ್ರಾಸ್, 13ನೇ ಮುಖ್ಯರಸ್ತೆ,<br>ಬಿ.ಟಿ.ಎಂ. ಮೊದಲನೇ ಹಂತ, ಬೆಂಗಳೂರು- 560 068.<br>(ಶ್ರೀ ಕೆ. ಕುಮಾರ್ ಅವರು ನಿವೃತ್ತರಾದ ಬಳಿಕ ನಿಯಮಿಸಲ್ಪಟ್ಟಿರುವರು) |
| ಅವರು ನೇಮಕಾತಿ ಮಾಡಿದ ತಾರೀಖು ನೇಮಕಾತಿ ಮಾಡಿದವರು | 30-9-2003<br>ಕಂಪನಿಯ ಸನ್ಮಾನ್ಯ ಸದಸ್ಯರುಗಳು |

ನಗರ: ಬೆಂಗಳೂರು
ದಿನಾಂಕ: 1-10-2003

ಕಂಪನಿಯ ಅಪ್ಪಣೆಯ ಮೇರೆಗೆ,
ಕ್ಯಾಜಿನೋವ್ ಇಂಡಿಯಾ (ಹೋಲ್ಡಿಂಗ್ಸ್) ಪ್ರೈ. ಲಿಮಿಟೆಡ್ (ಮುಚ್ಚುವ ಸ್ಥಿತಿಯಲ್ಲಿರುವ)
**ಪಿ. ಸುದರ್ಶನಂ**
ನಿರ್ದೇಶಕರು/ ಲೇಣಿ ದೇಣಿ ವ್ಯವಸ್ಥಾಪಕರು

ಪಿ. ಡಿ. 94